'ತೊದಲ್ನುಡಿ' ಗ್ರಂಥಮಾಲೆ—ನುಡಿ ೫

# ಕಾವ್ಯಸಾಮ್ರಾಜ್ಯ

ಅಖಿಲ ಕರ್ನಾಟಕದ

ಆಧುನಿಕ ಕವಿಶ್ರೇಷ್ಠರು

ಕಿರಿಯರ ಪ್ರಪಂಚ

ಉಡುಪಿ

೧೯೩೪

ತುಳುನಾಡ್ ಛಾಪಖಾನ್, ಉಡುಪಿ

# ಮುನ್ನುಡಿ

ಗೀತಾಚಾರ್ಯನಾದ ಶ್ರೀ ಕೃಷ್ಣದೇವನ ಕಣ್ಣ ಬೆಳದಿಂಗಳೂ, ಕೊಳಲಿನ ಇಂಪು ಹಾಡೂ ಎಡೆಬಿಡದೆ ಎದೆಯಲ್ಲಿ ಊರುತ್ತಿರುವ ಉಡುಪಿ ಕ್ಷೇತ್ರದ "**ಕಿರಿಯರ ಪ್ರಪಂಚ**"ದವರು ಈ ಕವನಗಳ ಸಂಗ್ರಹವನ್ನು ಮಾಡಿದ್ದಾರೆ.

ಅರುಣವಾಯಿತು, ಉದಯವಾಯಿತು. ಕತ್ತಲೆಯ ಹೆಸರು ಕೂಡ ಮರೆತು ಹೋಯಿತು. ಕನ್ನಡ ನಾಡಿನ ಊರುಗಳಲ್ಲಿ, ಹಳ್ಳಿಗಳಲ್ಲಿ, ಬಯಲುಗಳಲ್ಲಿ, ತೋಪುಗಳಲ್ಲಿ—ಎಲ್ಲೆಲ್ಲೂ ಹಾಡಿನ ಸವಿಯುಲಿ ಕೇಳಿಸುತ್ತಿದೆ. ಎಲ್ಲಾ ಕಡೆಯ ಕಿರಿಯ ಮಕ್ಕಳು, ಹಿರಿಯ ಮಕ್ಕಳು ಕನ್ನಡಮ್ಮನ ಪಾದದಲ್ಲಿ (ಅವಳಲ್ಲಿ ಭಾರತಮ್ಮನೂ ಒಂದೇ ಆಗಿ ಕಲೆತುಕೊಂಡಿದ್ದಾಳೆ) ಭಕ್ತಿಯ ಅರಳುಗಳನ್ನು ಚೆಲ್ಲುತ್ತಿದ್ದಾರೆ. ಆನಂದದ ಸುಗ್ಗಿ!

ರಸಪ್ರಸಾದ! ಪ್ರಕೃತಿಯ ಚೆಂದ, ನಲ್ಲೆಯ ಒಲುಮೆ, ತಾಯ ಸೇವೆ, ವೀರಗನಸು, ಭಕ್ತಿಯ ಮುದಿತ, ದಯೆ, ವಿಶ್ವದೊಕ್ಕಟ್ಟು, ಹೊಸ ಹುಟ್ಟಿನ ಹೊಸ ಸೃಷ್ಟಿಯ ಹೆಮ್ಮೆ.

ಎಲ್ಲಕ್ಕೂ ಹಿತವಾಗಿ ಅಚ್ಚಗನ್ನಡದ ತಿಳಿನುಡಿ, ಅಚ್ಚಗನ್ನಡದ ಸವಿಹಾಡು, ಅಚ್ಚಗನ್ನಡಿಗರ ಬಾಳುಬದುಕು. ಕನ್ನಡದ ಹೊಮ್ಮಳೆ.

ಈ ಕಾವ್ಯಸಾಮ್ರಾಜ್ಯವನ್ನು ಹೆಚ್ಚಾಗಿ "ಕಿರಿಯ" ಕವಿಗಳ ಕವನಗಳಿಂದಲೇ ಕೂಡಿಸಿರುವ ಕಿರಿಯರ ಪ್ರಪಂಚಕ್ಕೆ ಕನ್ನಡಿಗರು ಋಣಿಗಳು. ಹಿರಿಯರೆಲ್ಲರೂ ಇದನ್ನು ಆನಂದದಿಂದ ಓದುವರು.

ಸಿರಿಗನ್ನಡಂ ಗೆಲ್ಗೆ.

ಬೆಂಗಳೂರು,<br>
೧೨—೫—'೩೪

**ಬಿ. ಎಂ. ಶ್ರೀಕಂಠಯ್ಯ.**

# ಕವನಗಳೂ ಕವಿಕುಲವೂ

**ಭರತಾರ್ಪಣ, ಸ್ಪಂದನ**

ಶ್ರೀ|| ನರೇಗಲ್ಲ ಪ್ರಹ್ಲಾದ ರಾಯರು, ಧಾರವಾಡ.

**ಗೀತೆಗೆ**

ಶ್ರೀ|| ವಿ. ಸೀತಾರಾಮಯ್ಯನವರು, ಎಂ.ಎ., ಬೆಂಗಳೂರು

**ಎನ್ನ ಮುದ್ದಿನ ಗಿಣಿಯೆ!**

ಶ್ರೀ|| ಉಗ್ರಾಣ ಮಂಗೇಶರಾಯರು, ಪುತ್ತೂರು.

**ನಾವೆಲ್ಲರೂ ಒಂದೇ**

ಶ್ರೀ|| ಆರ್ಗನ್ ಲಕ್ಷ್ಮಣ ರಾಯರು, ದಾವಣಗೆರೆ.

**ಯಾವಕಾಲದ ಶಾಸ್ತ್ರವೇನು ಹೇಳಿದರೇನು?**

**ನೇಗಿಲಯೋಗಿ**

ಶ್ರೀ|| ಕೆ. ವಿ. ಪುಟ್ಟಪ್ಪನವರು, ಎಂ.ಎ., ಮೈಸೂರು.

**ಬನದ ಕುಸುಮ, ಜಗನ್ಮಾತೆ**

ಶ್ರೀ|| ದೇವೇಂದ್ರ ಶೇಣ್ವೈ, ಚೆಂಡಿಯೆ.

**‘ಅದ್ಬೋ’**

ಶ್ರೀ|| ಕೊರಡ್ಕಲ್ ಶ್ರೀನಿವಾಸ ರಾಯರು, ಉಡುಪಿ.

**ನೀರಗುಳ್ಳಿ**

ಶ್ರೀ|| ಸಾಲಿ ರಾಮಚಂದ್ರ ರಾಯರು, ಬಿ.ಎ., ಧಾರವಾಡ.

**ಗುರಿ**

ಶ್ರೀ|| ಹೇಜೀಬ ರಾಮಚಂದ್ರ ಅವರು, ಧಾರವಾಡ.

**ಒಂದು ಕಾಗದ**

ಶ್ರೀ|| ಎಂ. ಆರ್. ಶ್ರೀನಿವಾಸಮೂರ್ತಿ ಅವರು, ಬೆಂಗಳೂರು.

**ಅವಳಿಜವಳಿ**

ಶ್ರೀ|| ‘ವಿಠು’, ‘ಕಿರಿಯರ ಪ್ರಪಂಚ’, ಉಡುಪಿ.

**ಪ್ರಾರ್ಥನೆ**

ಶ್ರೀ|| ಎಂ. ಎನ್. ಕಾಮತ್ ಅವರು, ಮಂಗಳೂರು.

# ಕಾವ್ಯಸಾಮ್ರಾಜ್ಯ

ಅರಳಿ ಮೆರೆಯುತಿರುವ ಸುಮದಿ
ಅವಳ ರೂಪು ಬಿಂಬಿಸಿಹುದು,
ತಂಪು ಸುಗ್ಗಿ ಗಾಳಿಯಲ್ಲಿ ಅವಳ ಉಸಿರು ತುಂಬಿದೆ,
ಹಕ್ಕಿಯೊಂದು ಚಿಲಿಪಿಲಿಯಲಿ
ಅವಳ ಸ್ವರವೆ ಧ್ವನಿಸುತಿಹುದು,
ಸಂಜೆ ತಾರೆಯಲ್ಲಿ ಅವಳ ಕಣ್ಣ ಕಾಂತಿಗಿಂಬಿದೆ.

ಇರುಳ ಶಾಂತಿಯಲ್ಲಿ ಅವಳ
ಮೌನವೊಂದೆ ಸುರಿಯುತಿಹುದು,
ನದಿಯ ಕಲಕಲದಲಿ ಅವಳ ಗಾನವೊಂದೆ ಪುಟಿದಿದೆ,
ತಿಳಿಯ ತಿಂಗಳಿಂಪಿನೊಡನೆ
ಅವಳ ಕಾಂತಿ ಕರೆಯುತಿಹುದು,
ಭವದ ಮಾಯೆಯಲ್ಲಿ ಅವಳ ಚಿಂತೆಯೊಂದೆ ಇಡುಗಿದೆ.

ಜನದ ಎದೆಯ ಮಂಟಪದಲಿ
ಕಾವ್ಯರಾಣಿಯವಳ ಪೀಠ,
ಕಲೆಯ ರತ್ನದೊಸಪನಾಂತು ಮೇಲಕೆತ್ತರಿಸಿದೆ,
ಧರೆಯೊಳಿಲ್ಲಿ, ಆಗಸದಲಿ,
ಗ್ರಹಗಳಲ್ಲಿ, ತಾರೆಗಳಲಿ,
ಎತ್ತ ನೋಡೆ ಕಾವ್ಯಸಾಮ್ರಾಜ್ಯ ಚಿತ್ತರಿಸಿದೆ.

ವೆಂಕಟರಮಣಾಚಾರ್ಯ.

# ಹೊಸ ಹುಟ್ಟು

ನಿನ್ನೆರಕದೆರಕವನೆ ಹೊಯ್ದು **ನನ್ನನು** ಮಾಡಿ
**ತನ್ನತನ**ವನು ತೋರಿ ನನ್ನ ಪೊರೆದಿ!
—ಕರುಳ ಕರುಳಲ್ಲಿಟ್ಟು ಮೋಹಮಮತೆಯ ತಾಯಿ
ಕರುಳ ಕುಡಿಯನು ಇರದೆ ಕಾಯ್ದ ತೆರದಿ!

**ಗು**ಬ್ಬಿ ಗುಬ್ಬಿಗೆ ಗುಟುಕು ಕೊಟ್ಟು ಸಲಹುವ ತೆರದಿ
ಅಬ್ಬೆ! ಮಮತೆಯ ಮೊಲೆಯನುಣ್ಣಿಸಿದೆಯೌ!
ಕಯ್ಯ ತೊಟ್ಟಿಲ ಕಟ್ಟಿ ಪ್ರೀತಿಗೀತಿಯ ಪಾಡಿ
ಒಯ್ಯನೊಯ್ಯನೆ ಉಯ್ಯಾಲಾಡಿಸಿದೆಯೌ!

**ಕೆ**ಟ್ಟ ಜೀವವ ತಮಗೆ ಜವನಟ್ಟುತಿರೆ, ನಿನ್ನ
ಹೊಟ್ಟೆಯೊಳು ಬಂದು ಹೊಸ ಹುಟ್ಟ ಕಂಡೆ!
ಅಮ್ಮ! ನಲ್ಮೊಲೆಗಳಿಂ ತೊರೆಯಾಗಿ ಹರಿಯುತಿಹ
ಇಮ್ಮತೊರೆಯನು ಹೊಟ್ಟೆತುಂಬ ಉಂಡೆ!

**ಹು**ಟ್ಟುಗುರುಡನಿಗೆ ಹೊಸದಿಟ್ಟಿಯನೆ ಕೊಟ್ಟಂತೆ,
ಮೊಟ್ಟಮೊದಲಿನ ಮುದ್ದು ಮುದ್ದಿನಂತೆ,
ಬುದ್ಧಿಗಂದಿನಿಸಿತೌ—ಬೆಳಗು ಮುಂಜಾವದಲಿ
ನಿದ್ದೆಯನು ತಿಳಿದೆದ್ದ ಕೂಸಿನಂತೆ!

**ಮೈ**ಗೊಂದು ಹುಟ್ಟುಂಟು, ಮನಕೊಂದು ಹುಟ್ಟುಂಟು!
ಹೀಗುಂಟು ಗಂಟಿನೊಳಗೊಂದು ಗಂಟು!
ತನುವೆಂಬ ಕೀಳುಹುಳು ನೆಲದಲ್ಲಿ ಹರಿಯುತಿರೆ,
ಮನದ ಪಾತರಗಿತ್ತಿ ಪಾರ್ವುದುಂಟು!

— **ಬೆಳಗಾಂವಿ ರಾಮಚಂದ್ರ.**

---

A

# ಕಹಳೆ

ಕಹಳೆಯದೊ ಮೊಳಗಿತ್ತು ಜೀವಕಳೆಹೊಂಚಿತ್ತು
ಯುಗಯುಗಗಳಾ ಜಾಡ್ಯ ಹರಿದತ್ತ ಹೋಯ್ತು;
ದುರ್ದೈವವದಿರಿಯುವು; ದುರ್ಭೂತ ಬೆದರಿಯುವು;
ಪೌರುಷದ ಧಾಟಿಯಲಿ ಧಾತ್ರಿ ಹಿಳುಗಿತ್ತು!

ಸತ್ತುಹುಟ್ಟಿದ ಜನರೆ! ಸುಮ್ಮನೇ ಬರಡಾಯ್ತು
ನಿಮ್ಮ ಜನ್ಮವು; ಬನ್ನಿ! ಹೊಸಜನ್ಮ ತಾಳಿ!
ಹಿಂದೆಂದು ಕೇಳದಿಹ ಮುಂದೆಂದು ಕಾಣದಿಹ
ವೀರವಿಲಸಿತವಿದನು ನೋಡಿ ಸೊಗಬಾಳಿ!

ಉಗ್ಗಡಿಸುತಿಹ ಜೀವ ನೆಗ್ಗಿ ಕೀರ್ತಿಧ್ವಜವ
ಭವಿತವ್ಯತೆಯನೆತ್ತಿ ಹತ್ತುವುದು ನೋಡಿ!
ಶತಮಾನಗಳಗತಿಯ ಒಂದೊಂದೆ ಪದಹತಿಯ
ರಭಸದಲಿ ದೂಡುವರು ನೋಡಿವರ ಮೋಡಿ!

ಇಂದಿನಾವೇಶವಿದು! ಹಿಂದಿನಾ ಪರಿಯಲ್ಲ;
ಒಡೆತನಕೆ ತಲೆಬಾಗಿ ಮುರುಟಲಿಹುದಲ್ಲ;
ರಾಜಪದಪೀಠಕ್ಕೆ ಹಣೆಯ ಹಚ್ಚುವುದಲ್ಲ;
ಒದೆತಕ್ಕೆ ಮೈಚಾಚಿ ಹುಡಿಯಪ್ಪುದಲ್ಲ.

ಒಂದುಕಾಲಕೆ ಸೊಬಗ ತಂದುಸಂದುದು ನಮ್ಮ
ಹಳೆಯಕಾಲದ ಧರ್ಮ-ಅನೀತಿ-ಗೀತಿ.
ದೇವರೀನೆಲಕೆ, ಈ ನೆಲದವರು ಆ ನೆಲಕೆ
ಹೋಗಿ, ಬರುತಿದ್ದರಂದಿಗೆ ಅದೇರೀತಿ.

ಇಂದೇನ ಕೇಳುವಿರಿ? ಬ್ರಹ್ಮಾಂಡಭಾಂಡದಲಿ
ಸಕಲಕುಲ ಜಾತಿಧರ್ಮಗಳ ತೊಳಸುವನು

ಕಾಲನೆಂಬಡುಪಳನು; ಎಲ್ಲರಿಗು ಕುದಿಯೊಂದೆ
ತಮಗೆ ತಾವಾಗಲಿಪ ಉಬ್ಬಿಗದ ಹದನು

**ಸ್ವಾ**ತಂತ್ರ್ಯದಮರ ಸೌಖ್ಯವ ಕಂಡರಿವರಲ್ಲ;
ಜನನದೊಳೆ ಬೇರ್ಬಿಟ್ಟು ಬೆಳೆದಿಹುದು ದಾಸ್ಯ;
ನೂರು ವರ್ಷದ ಬಾಳ ಹರಕೆ ಹೆತ್ತರ ಮೊಗದಿ
ಕಾಣದೆ ಅಕಾಲಮೃತ್ಯುವ ವಿಕಟಲಾಸ್ಯ?

**ವೀ**ರಪೂಜೆಯ ಕಹಳೆಯಿವರ ಹೊಡೆದೆಬ್ಬಿಸಿತು
ಆತ್ಮವಿಜಯಧ್ಯಾನ ದೆಸೆಗೆ ಹಬ್ಬಿದುದು.
ಎಷ್ಟೊ ದಿನವೊರಗಿಸಿತು ಮೋಹಸಿದ್ಧಾಲಸ್ಯ
ಇವರಿಂದೆ ಎಚ್ಚರಿನ ಸೊಗವ ಕಂಡಿಹುದು.

**ನ**ಮಗೆಷ್ಟು ದಿನವಿಹುದೊ ಅಷ್ಟು ದಿನ ತಲೆಯೆತ್ತಿ
ಮನುಜರಂದದಿ ಬಾಳಿ ಸಾಯಲಿರಬೇಕು.
ಒಂದೆ ತೊಟ್ಟಿಲೊಳೊರಗಿ ಬೆಳೆದ ಮಕ್ಕಳು ನಮಗೆ
ಇನಿತೇಕೆ ಭೇದವೆಂಬುದ ನೋಡಬೇಕು.

**ಎಂ**ದು ಸಿಡಿಗುಂಡ ಮಲ್ಲಿಗೆಯಂತೆ ಧರಿಸುವರು;
ಹೊಡೆಯುವ ಶತಘ್ನಿಗಳಿಗೆದೆಯನೊಡ್ಡುವರು;
ಮೃತ್ಯುವಿನ ದಾಡೆಗಳ ಕೈತೂಂಕಿ ಕಳಚುವರು;
ಅಯ್ಯಯ್ಯೊ! ಇವರನಾರಿಂದು ತಡೆಯುವರು?

**ಹು**ಟ್ಟಿದಂದೇ ಚಂಡ ಪುರುಷಕಾರವ ತಳೆವ
ನವಘಟೋತ್ಕಚರಿವರೆ? ರುದ್ರವಿಕ್ರಮರೆ?
ಸುರಿಯೆ ನೆತ್ತರ ಬಿಂದು ಸಾವಿರದೆ ಎದೆಗೊಡುವ
ರಕ್ತಬೀಜರೆ? ಏನು ಶಕ್ತಿಸಾಧಕರೆ?

## ಕಾವ್ಯಸಾಮ್ರಾಜ್ಯ

**ಮ**ರುಳೊ ಹುರುಳೋ ಸೋಲೊ ಗೆಲವೊ ಬಲ್ಲವರಾರು?
ವೀರರಸ ರೋಮರಂಧ್ರದಲಿ ಹೊಮ್ಮುತಿರೆ;
ಅಶನಿ ನಿರ್ಘೋಷವೆನೆ ಜಯಕಾರಗಳ ಮಾಡಿ
ಮುಂದೆ ಮುಂದೊತ್ತುವರು ಭಾಪು ಭಳಿರೆ!

**ಬಾ**ನ ತಳಿಗೆಯಲಿಟ್ಟು ನಕ್ಷತ್ರ ಕುಸುಮಗಳ
ಹಾರೈಸಿ ನೋಡುವಳದೋ ದಿಗ್ವಧೂಟಿ!
ಸೋಲಿನಲಿ ಗೆಲವಿನಲಿ ಪುಷ್ಪಾಂಜಲಿಗಳಿವಂ
ಕಹಳೆ ಕೆರಳಿಸಿತಿವರ ಜೀವಕ್ಕೆ ನಾಟಿ!

— ಕಡೆಂಗೋಡ್ಲು ಶಂಕರಭಟ್ಟ.

---

# ತರುಣರ ದಸರೆ

ಹೆಜ್ಜೆಯ ಹಾಕುತ ಬನ್ನಿರಿ ಮುಂದೆ
  ನೋಡಲು ದಸರೆಯ ಹಬ್ಬವನು
ಉತ್ಸಾಹದ ಕಿರುಗೆಜ್ಜೆಯ ಕಟ್ಟಿ
  ಹಾಡಿರಿ ನಾಡಿನ ಕಬ್ಬವನು.
ಹಬ್ಬಗಳೆಲ್ಲಾ ದಸರೆಯ ಹಬ್ಬ;
ಕಬ್ಬಗಳೆಲ್ಲಾ ರನ್ನನ ಕಬ್ಬ;
ತಿಂಡಿಗಳೆಲ್ಲಾ ಬುಂದಿಯ ಲಾಡು
ಧರೆಯೊಳಗೆಲ್ಲಾ ಕನ್ನಡನಾಡು
ನಾಡಿನ ಹಾಡನು ಹಾಡುತ ಬನ್ನಿ!
ದಸರೆಯ ಹಬ್ಬವ ನೋಡಲು ಬನ್ನಿ!

**ಮೋ**ಡಗಳೆಲ್ಲವು ಸರಿದವು ಹಿಂದೆ
  ಆಗಸವೆಲ್ಲಾ ಬಿಳುಪಾಯ್ತು.
ಚಳಿಗಾಲೆಂಬುವ ಸಗ್ಗದ ಅಗಸ
  ಗಗನವ ತೊಳೆದನು! ನೆನಪಾಯ್ತು!
ಬೆಳಕೇ ಇಲ್ಲದ ಮಳೆಗಾಲ
ಹಿಂದಕೆ ಸರಿಯಿತು ಆ ಕಾಲ
ಮೂಡಿದೆ ಬೆಳಕಿನ ಚಳಿಗಾಲ
ಜ್ಞಾನವ ಬೀರುವ ನವಕಾಲ
'ಮುಗಿಲಿನ ಮಳೆ ಮುಗಿಯಿತು' ಅನ್ನಿ
ನಗು ಮಳೆಯನು ಸುರಿವುತ ಬನ್ನಿ!

'**ಸೀ**ಮೋಲ್ಲಂಘನ' ಮಾಡಿರಿ ಇಂದು
  ಭೀತಿಯ ಸೀಮೆಯ ದಾಟುತಲಿ,
ಧೈರ್ಯಧ್ವಜವನು ಮೆರಸುತ ಮುಂದು
  ನಡೆಯಿರಿ ನೀತಿಯ ನಾಡಿನಲಿ.

ಧರ್ಮದ ಗಡಿಯನು ದಾಟಲು ಬೇಡಿ,
ಕರ್ಮದ ಕೋಲನು ಬಿಡದಲೆ ಓದಿ,
ಮರ್ಮವ ತಿಳಿದೆಲ್ಲರು ಹಾರಾಡಿ
ಚರ್ಮದ ದೇಹದ ಸಾರ್ಥಕ ಮಾಡಿ.
'ಬನ್ನಿಯು ಗಿಡ ಬಂದಿತು' ಅನ್ನಿ
ಚಿಣ್ಣರೆ, ನೀವೆಲ್ಲರು ತನ್ನಿ.

'ಹಿಂದಿನ ಕಾಲವು ಹಿಂದಕೆ' ಅನ್ನಿ,
ಮುಂದಿನ ಕಾಲವು ನಮ್ಮುಂದೆ,
ನಾಡಿನ ಯುವಕರೆ, ಮುಂದಕೆ ಬನ್ನಿ
ಮುದುಕರು ನಿಲ್ಲಲಿ ಹಿಂದಿಂದೆ,
ಹೊಸಹೊಸ ಮತಗಳ ಬಗೆಬಗೆ ಹುರುಪಿನ
ಚೆನ್ನ ಚಿಟಾಕಿಯ ಹಾರಿಸುವ,
ಕೆಂಪಿನ ವರ್ಣದ ಕೆಚ್ಚಿದೆ ಬಣ್ಣದ
ಕಿಡಿಗಳನವರಿಗೆ ತೋರಿಸುವ.
ಮುದುಕರು ನಿಲ್ಲಲಿ ತುಸು ಹಿಂದೆ
ಹುಡುಗರ ಸಾಹಸ ಏನೆಂಬೆ!
ಮುದುಕರು ಪಾಪ! ಕಂಗಳು ಮಂದ
ಮುಂದಿನ ನೋಟವ ನೋಡಲು ಅಂಧ,
ಹೊಸಹೊಸ ರೀತಿಯ ದೂರುವರು
ಹಳೆಯ ಪುರಾಣವ ಹೇಳುವರು.

ಅಂಧ ಭಕ್ತಿಗೆ ಉರಿಯನು ಒಡ್ಡಿ
ನಿಲ್ಲಿರಿ ಎಲ್ಲರು ಗೋಲಾಗಿ,
ಚಂದದಿಂದ ಚಪ್ಪಾಳೆಯ ತಟ್ಟುತ
ಮುಂದಕೆ ನಡೆಯಿರಿ ಸಾಲಾಗಿ.
ದೊಡ್ಡ ಮನಸಿನ ಕುದುರೆಯ ಹತ್ತಿ,
ಕೈಯಲಿ ಹಿಡಿಯಿರಿ ಧೈರ್ಯದ ಕತ್ತಿ;

ಹಿಂದು ಧರ್ಮದಾ ಘೇಠಾ ಸುತ್ತಿ
'ಆತ್ಮಸಂಯಮುವ'—ಲಗಾಮು ಜಗ್ಗಿ,
ಮಗುಡವ ಬಗ್ಗಿಸಿ, ಹಿರಿಹಿರಿ ಹಿಗ್ಗಿ,
ಎಲ್ಲ ಜಾತಿಗಳ ಗುಂಪನು ನುಗ್ಗಿ,
ಭೇದವನೊಡೆಯಿರಿ ತಲೆಯನು ಬಗ್ಗಿ;
ಆಗ ನಲಿಯುವದು ಸಂತಸ ಸುಗ್ಗಿ
ಭಾರತ ಭೂಮಿಯ ಅಬಲತೆ ಕುಗ್ಗಿ.
ಅಂದು ಮೂಡುವನು ದಸರೆಯ ಅರುಣ
ಅಜ್ಞಾನದ ಕತ್ತಲೆಗದು ಮರಣ.
  ಮಾನವ ಧರ್ಮದ ದಸರೆಯ ಮಾಡಿ
  ಕನ್ನಡ ನಾಡಿನ ಹಾಡನು ಹಾಡಿ.

ನವೀನ ಆಸೆಯ ಹೊಸ ಚಿಗುರುಗಳೇ
ನಮ್ಮಾ ಕುದುರೆಗೆ ಆಹಾರ;
ನಾವು ಹೊರಡುವುದು ವಿಜಯಾದಶಮಿ
ಅಂದಿನ ದಿನವೇ ರವಿವಾರ.
ಸೀಮೋಲ್ಲಂಘನ ಮಾಡಿರಿ ಬನ್ನಿ.
ಸುಗುಣಗಳೆಂಬಾಯುಧಗಳ ತನ್ನಿ,
  ಬನ್ನಿಯ ಗಿಡವನು ಸೇರಲು ಬನ್ನಿ
  ಹಾಡುತ ಬನ್ನಿರಿ, ಸ್ವರ್ಣವ ತನ್ನಿ;
ಒಂಟೆಯ ಮೇಲಿನ ಯಾರೋ ಜಾಣ
ಒಡಕು ನಗಾರಿಯ ಬಾರಿಸೆ, ಅವನ
ರುಂಡವ ಬೀಳಿಸಿ, ಹೋಗಲಿ ಪ್ರಾಣ
  ಮುಂದೆ ಸಾಗಲಿ ಶೂರಗಣ.
ರನ್ನನ ಕಾವ್ಯದ ಕೊಂಬನು ಊದಿ,
ದೇಹದಲೆಲ್ಲಾ ಶೌರ್ಯವ ತುಂಬಿ,
ಪಂಪನ ಹೆಸರನು ಸೊಂಟಕೆ ಸುತ್ತಿ,

ರನ್ನನ ಭೀಮನ ಗದೆಯನು ಎತ್ತಿ.
ಹುಕ್ಕನ, ಬುಕ್ಕನ ಶಸ್ತ್ರವ ಹೂಡಿ.
ವಿದ್ಯಾರಣ್ಯರ ಚರಿತೆಯ ಹಾಡಿ.
ದಸರೆಯ ಹಬ್ಬವ ಹಬ್ಬಿಸಿರಿ,
ಕನ್ನಡ ನಾಡನು ಹಿಗ್ಗಿಸಿರಿ.

ಬನ್ನಿಯ ಗಿಡದಡಿ ಬೇಗನೆ ಬಂದು
ಕೃಪಣತೆಯೆಂಬಾ ಕುನ್ನಿಯ ಕೊಂದು
ಬನ್ನಿಯ ಎಲೆಗಳ ತುಂಬಾ ಕುಯ್ದು
ತನ್ನಿರಿ ನವರಾತ್ರಿಯ ಫಲವೆಂದು
  ಅಂದು ಅಡಗುವುದು ಕುಂದು.
'ಪೂರ್ವದು ಬೇಕು ಪೂರ್ವದು' ಎಂದು
ಏಕೆ ಬೊಗಳುವಿರಿ ಸುಮ್ಮಗೆ ನಿಂದು!
ಹಿರಿಯರ ಹೆಸರು ಸ್ಫೂರ್ತಿಗೆ ಸಾಕು,
ಹೊಸ ಕಾಲಕೆ ಹೊಸ ಸಿಂಗರ ಬೇಕು;
'ಹಳೆಯದು' ಎಂದು ಕುಳ್ಳಿರ ಬೇಡಿ:
ಹಳಬರ ನೆನೆದು ಮುಂದಕೆ ನೋಡಿ,
ದಸರೆಯ ಹೊಸಪರಿ ಹೂಡಲು ಬೇಕು
ಹಿಂದಿನ ಕಾಲದ 'ರೂಢಿಯು' ಸಾಕು.
  ಹಿರಿಯರದೆಲ್ಲವು ಬಲು ಚೆನ್ನ,
  ಆದರೆ ಏನ್ನೈ! ಆ ಚಿನ್ನ,
  ಅವರೊಂದಿಗೆ ಕೂಡಿದೆ ಮಣ್ಣಾ,
  ಇಂದಿಗೆ ಇಹುದೇ ಹೇಳಣ್ಣಾ!

ನಮ್ಮಾ ಹಿರಿಯರು ಎರಡಡಿಯ
ನಡೆದುದರಿಂದಲೆ ಈ ಗಡಿಯ
ಮುಟ್ಟಿದರಲ್ಲವೆ? ಇಲ್ಲಿಂದ
ಮುಂದಡಿಯಿಡುವುದು ನಾವೆಲ್ಲಾ

ಅಂದು ಬೆಳಗುವದು 'ನವರಾತ್ರಿ'
ಬೆಳಕಿಂ ಹೊಳೆವುದು ಈ ಧಾತ್ರಿ.
ಅಂದಿನ ದಸರೆಯು ನಿಜ ದಸರೆ!
ಇಂದಿನ ದಸರೆಯು ಬರಿ ಹೆಸರೆ!

ಏಳಿರಿ! ಏಳಿರಿ! ಸೊಂಟವ ಸುತ್ತಿ,
ಧೈರ್ಯದ ಕತ್ತಿಯ ಶೌರ್ಯದಿ ಎತ್ತಿ,
ಉತ್ಸಾಹದ ಕಿರುಗೆಜ್ಜೆಯ ಕಟ್ಟಿ,
ಅಂಧ ಭಕ್ತಿಯನು ತಟ್ಟನೆ ಮುತ್ತಿ,
ಕೊಂದು ಹಾಕಿ, ಅದು ಅರಿವಿಗೆ ಬುತ್ತಿ!
ವಿಶ್ವಧರ್ಮದಾ ಬೈಲನು ಸುತ್ತಿ,
ಜಾತಿಗಳೆಂಬಾ ಮೃಗಗಳ ಕೆತ್ತಿ,
ಭಾರತ ಭೂಮಿಯ ದೀಪವನೆತ್ತಿ,
ದಸರೆಯ ಹಬ್ಬದ ಜ್ಯೋತಿಯ ಹಚ್ಚಿ,
ದಾಸ್ಯವೆಂಬುವ ಕುನ್ನಿಯನೊತ್ತಿ
ಸ್ವಾತಂತ್ರ್ಯಸಿಂಹಗದು ಅರಿವಿನ ಬುತ್ತಿ!
ವಿಶ್ವಧರ್ಮದಾ ಬೈಲನು ಸುತ್ತಿ,
ಬೈಲು ಮುಗಿಯೆ, ಹಾ! ಕುದುರೆಯನೆತ್ತಿ,
ಆಕಾಶದ ಮೆಟ್ಟಿಲುಗಳ ಹತ್ತಿ,
ಮುಂದೆ ಸಾಗಿ ತಲೆ ಮೇಲಕೆ ಎತ್ತಿ!
ಸೀಮೋಲ್ಲಂಘನ ತೀರಿತು ಅಂದು
ಭಾರತ ಭೂಮಿಯ ಅಬಲತೆ ಕುಂದು.
ಇಂತು ಮಾಡಲದು ನಿಜ ದಸರೆ!
ಇಂದಿನ 'ದಸರೆಯು' ಬರಿ ಹೆಸರೆ!

— ದಿನಕರ ದೇಸಾಯಿ.

---

# ನಮ್ಮೂರ ನಂಜ

ನಮ್ಮೂರ ಬಾಗಿಲೊಳಿರುವನು ನಂಜ;
ನಮ್ಮೂರ ಹಿರಿಯನು ಮುತ್ತಜ್ಜ, ನಂಜ
ನಂಜನಿಗಿರುವಳು ಓರ್ವ ಮೊಮ್ಮಗಳು;
ನಂಜಿಯೆ ನಂಜನ ಜೀವದ ಕರುಳು.

ನಂಜನಿಗಾಯಿತು ಅರವತ್ತು ವರ್ಷ;
ನಂಜಿಗಿನ್ನೂ ಇಲ್ಲ, ಹನ್ನೆರಡು ವರ್ಷ.
ನಂಜನಿಗಿರುವುದು ಒಂದೇ ಚಿಂತೆ:
ನಂಜಿಯ ನೋಡ್ಕೊಳ್ವೋರಾರೆಂಬ ಚಿಂತೆ.

ತಬ್ಬಲಿಯಾದಳು ಚಿಕ್ಕಂದಿನಲ್ಲೆ;
ಒಬ್ಬರು ಎಳೆಮಗುಗೆ ಹಾಲುಣಿಸಲಿಲ್ಲೆ!
ಅಜ್ಜನೆ ತಾಯಾಗಿ, ತಂದೆಯು ಆಗಿ,
ಅಕ್ಕರೆಯಲಿ ಪೊರೆದ ದುಗುಡವ ನೀಗಿ.

ನಂಜಂಗೆ ದೇಹವು ಕುಗ್ಗುತಲಿರಲು,
ಸಾವಿನ ಹಂತವು ಕಾಣುತ ಬರಲು;
ನಂಜಿಯು ಪ್ರಾಯವ ತುಂಬುತಲಿಹಳು,
ನಂಜನ ಬಳಸಿತು ಮದುವೆಯ ಬಿಳಲು.

ನಂಜನಿಗಿದೊಬ್ಬ ಸೋದರ ಅಳಿಯ,
ಮೈಸೂರ ಸೇರಿದ ಕೆಲಸಕ್ಕೆ ಮರಿಯ.
ಮರಿಯನು ಹಿಂತಿರುಗಿ ಬರುವನು ಎಂಬ
ಆಸೆಯು ಬಳಸಿದೆ ಅಜ್ಜಂಗೆ ತುಂಬ.

ಅಜ್ಜನ ಮನೆಮಾರು ಮರಿಯನಿಗೆಂದು,
ಅಜ್ಜನ ಮೊಮ್ಮಗಳ ಕೈಹಿಡಿಯಲೆಂದು,
ಒಕ್ಕಣೆ ಬರೆಸಿದ ಮರಿಯನಿಗಂದು;
ಒಕ್ಕಣೆ ಬಂದಿತು ಹಿಂತಿರುಗನೆಂದು.

"ಇನ್ನಾರ ತರುವುದು, ಇನ್ನಾರು ಇಹರು?
ಇನ್ನೇನು ಗತಿ"—ಎಂದು ಕೊರಗಿದ ನಂಜ;
ನಂಜಿಗೆ ತಿಳಿಸದೆ, ಸುಳಿವನು ಸಿಗಿಸದೆ.
ಮನದಲ್ಲಿ ಮನೆ ಮಾಡಿ ಕೊರಗಿದ ನಂಜ.

ನಂಜಿಯ ಒಡನಾಡಿಯಾಗಿದ್ದ ಮರಿಯ,
ನಂಜಿಯ ಕೈಹಿಡಿವೆನೆಂದಿದ್ದ ಮರಿಯ,
ನಂಜಗೆ ಹಗಲಿರಳ ಕನಸಾಗೆ ಮರಿಯ,
ನಂಜಿಗೆ ತಿಳಿದರೆ, ಇನ್ನೇನೋ ಅರಿಯ!

ಸಂಜೆಯಾಯಿತಿನ್ನು ಹಸುಗಳ ಕೂಡಿ,
ನಂಜಯು ಹೊಲದಿಂದ ಹಟ್ಟೀಗೆ ಓಡಿ,
ಹುಲ್ಲಿನ ಹೊರೆಯನ್ನು ತಲೆಯಿಂದ ತೆಗೆದು.
ಹುಲ್ಲೆಯಂತೆ ಮನೆಗೆ ಬಂದಳು ನೆಗೆದು.

ಮನೆಯಲ್ಲಿ ಕಂಡಳು ಮೂಲೇಲಿ ಅಜ್ಜ,
"ಏತಕ್ಕೆ ಸುಮ್ಮನೆ ಕುಳಿತೆಯೊ, ಅಜ್ಜ?
ಮಾತಾಡು ಮುತ್ತಜ್ಜ, ಎನ್ನೊಳು ಅಜ್ಜ,
ಮಾತಾಡದಿರೆ ನೋಡು, ಅಳು ಬಂತು, ಅಜ್ಜ."

ಅಜ್ಜನ ಕಾಲ್ಗಳ ಅಪ್ಪಿದಳಂಜಿ,
ಅಜ್ಜನ ಮೊಗವೆತ್ತಿ ನುಡಿದಳು ನಂಜಿ,
"ಏನಾಯ್ತು ಪೇಳಜ್ಜ, ನಾ ಹೊರಗೆ ಹೋಗೆ,
ಆರು ಬಂದಿದ್ದರು, ಅಳುವುದು ಏಕೆ?"

**ಅ**ಜ್ಜ ನುಡಿಯಲಿಲ್ಲ, ಹೊರಟನು ಹೊರಗೆ.
ಹಾಲನ್ನು ಹಿಂಡುವೆನೆಂದು ಹಟ್ಟಿಗೆ.
ಹಟ್ಟಿಯೊಳೇನಿದು ಒರಗಿದನಯ್ಯೋ!
ಹಸುವೆಲ್ಲಿ ಜಾಡಿಸಿತೊ, ಮರೆತನು ಮೈಯ್ಯೋ!

**ಹಿ**ಡಿದನು ಹಾಸಿಗೆ ಪಟ್ಟನೆ ಅಜ್ಜ,
ಪೆಟ್ಟಿನ ಬಾಧೆಗೆ ತಡೆಯದೆ ಅಜ್ಜ;
ಮನಕಂದು ಪೆಟ್ಟಾಯ್ತು ದೇಹಕ್ಕು ಪೆಟ್ಟು!
ಮತ್ತೆಂತು ಚೇತರಿಸಿಕೊಳ್ಳನೊತ್ತಿಟ್ಟು!

**ಹ**ಗಲಿರಳು ನಂಜಿಗೆ ಅಜ್ಜನುಪಚಾರ.
ಯೋಚನೆ ತುಂಬಲು ಬಿಟ್ಟಳಾಹಾರ;
ಮರಿಯನ ನೆನಪೊಂದು ಬಾಧಿಸುತಿರಲು,
ಕರೆಕಳಿಸಿದಳವನನೊಡನೆಯೆ ಬರಲು

**ಮ**ರಿಯನು ಬರುವನು ಎಂಬೆಂಬ ವಾರ್ತೆ
ಅಜ್ಜನ ಹೃದಯಕೆ ಹರುಷವ ಬಿತ್ತೆ,
ಚೇತರಿಸಿ ಕೊಂಡೆದ್ದನೊಡನೆ ಮುತ್ತಜ್ಜ,
ಕಾಯುತಲಿರುವುದೆ ಆದುದು ಕಜ್ಜ.

**ಹಾ**ಸಿಗೆ ಬಳಿಗಾಗ ನಂಜಿಯು ಕರೆದು,
ಮಾತಾಡ ತೊಡಗಿದ ಚಿಂತೆಯ ತೊರೆದು—
"ಮರಿಯನು ಬಂದೊಡನೆ ಧಾರೆಯನೆರೆದು,
ನೀಗುವೆ ಜೀವವ ಶಾಂತಿಯ ಪಡೆದು."

"**ಸು**ಖದಿಂದ ಬಾಳಿರಿ ನೀವಿರ್ವರಿನ್ನು,
ಮೈಸೂರು ಏತಕ್ಕೆ ಮರಿಯನಿಗಿನ್ನು.
ನೆನೆಯಿರಿ ಅಜ್ಜನ ನಿಮಗಾಗೆ ಕುವರ,
ಇರಿಸಿರಿ ಅವನಿಗೆ ಅಜ್ಜನ ಹೆಸರ."

**ಕ**ನಸನು ಕಾಣುತಲಿರುವನು ನಂಜ,
ಬಣ್ಣಿಸುತೀರ್ವರ ಭಾವೀಪ್ರಪಂಚ
ನಾಚಿಕೆಯಲಿ ನಂಜಿ ತಗ್ಗಿಸಿ ತಲೆಯ,
ಆಲಿಸುತಿರುವಳು ಅಜ್ಜನ ನುಡಿಯ.

**ಬಾ**ಗಿಲು ತೆರೆಯಿತು, ಬಂದವರಾರು?
ಎಚ್ಚೆತ್ತು ಎದ್ದರು, ಮರಿಯನೆ ನೋಡು!
ಮರಿಯನ ಜೊತೆಯೊಳಗಿರುವವಳಾರು?
ಆಶೀರ್ವದಿಸೆಂದು ಮಣಿದರು ಜೋಡು!

"**ಕ**ರೆಕಳಿಸುವುದಕ್ಕೆ ಆಗಲೆ ಇಲ್ಲ,
ನಿನ್ನೆಗೆ ಮುಗಿಯಿತು ಮದುವೆಯು ಎಲ್ಲ,
ನಾವೀರ್ವರೊಡನೆಯೆ ಹೊರಟು ಬಂದೆವು,
ನಮ್ಮ ಭಾಗ್ಯವೆಲ್ಲ ಅಜ್ಜನ ಕೃಪೆಯು!"

**ಮ**ರಿಯನ ನುಡಿಕೇಳುತಜ್ಜನು ಮಲಗೆ,
ನಂಜಿಯ ಕಂಗಳು ಕಂಬನಿ ಕರೆಯೆ,
ಮರಿಯಂಗೆ ಮಡದಿಗೆ ದಿಗ್ಭ್ರಮೆ ಹಿಡಿಯೆ,
ಕತ್ತಲು ಕವಿಯಿತು ನಂಜನ ಮನೆಗೆ.

**ನ**ಮ್ಮೂರ ಬಾಗಿಲೊಳಿದ್ದನು ನಂಜ,
ನಮ್ಮೂರ ಹಿರಿಯನು ಮುತ್ತಜ್ಜ, ನಂಜ,
ನಂಜನಿಗಿದ್ದಳು ಓರ್ವ ಮೊಮ್ಮಗಳು;
ನಂಜಿಯು ಚಿಂತೆಯಲಿ ನಂದಿತಾ ಬಾಳು.

—ಕೆ. ಗೋಪಾಲಕೃಷ್ಣರಾಯ.

---

# ಮೊದಲಗಿತ್ತಿ

ಮೊದಲಗಿತ್ತಿಯಂತೆ ಮೆರೆಯುವಿಯೋ ತಾಯಿ
ಮೊದಲಗಿತ್ತಿಯಂತೆ ಮೆರೆಯುತಿಹೆ!

ಹಿಂಡಾಗಿ ಪುಂಡರು ಅಂಡಲೆಯಲು ನಿನ್ನ
ನೆತ್ತರು ಒರೆ ಹಚ್ಚಿ ನೋಡಿರುವೆ.
ಪಾತಾಳ ಕಂಡರು ಕೆಲ ತಾಯಿ ಗಂಡರು
ಅವರನ್ನು ಮಡಿಲಾಗ ಮಡಗಿಸಿಹೆ.
ಹದಿನಾರು ರಾಜರು ತಲೆ ಕೆಳಗಾದರು
ಆದರು ತಲೆಯೆತ್ತಿ ನಿಂತಿರುವೆ.
ನಿನ್ನ ತೇಜದ ಮುಂದೆ ರಾಜತೇಜವು ಕೂಸು
ಮೊದಲಗಿತ್ತಿಯು ನೀನು
ಮೆರೆಯುತಿಹೆ!

ಒಕ್ಕುಡಿತೆ, ಅರೆಮುಕ್ಕು ಎನುತೆನುತ ಹಲಕೆಲವು
ಪಾನಿಪತ್ತುಗಳನ್ನು ಮುಕ್ಕುಳಿಸುವೆ.
ಕೊಡಲಿರಾಮನು ಎರೆದ ಕೆನ್ನೀರ ಜಳಕಕ್ಕೆ
ಕೂದಲು ನನೆಯಲಿಲ್ಲೆನ್ನುತಿಹೆ.
ಅವತಾರಕ್ಕೊಂದೊಂದು ಅಭಿಷೇಕ ಮಾಡಿಪಡು
ಎಣ್ಣೆಮಜ್ಜನ ಬೇರೆ ಬೇಕೆನುವೆ.
ನೆತ್ತರ ಮಿಾಯಿಸುವ ಕೆಂಚರ ಕೈಯಿಳಿಸಿ
ಮೊದಲಗಿತ್ತಿಯೆ! ನೀನು
ಮೆರೆಯುತಿಹೆ.

ಹಾಲಿನ ಹೃದಯಕ್ಕೆ ಕುಬ್ಬಸವನು ತೊಡಿಸಿ
ಹೂಮುಡಿಸಿಕೊಂಡೆಂದು ನೀ ನಲಿವೆ?

## ಕಾವ್ಯಸಾಮ್ರಾಜ್ಯ

ಬಸಿರು ತುಂಬಲು ಹಸಿರುಡಿಗೆಯನುಟ್ಟಿಂದು
ವನವಾಸ ನವಮಾಸ ತೀರಿಸುವೆ?
ಮುನ್ನಿಲ್ಲ ಇನ್ನಾರೆ ಮಕ್ಕಳ ದಿನವೆಂದು
ಮೂಡೀತು ಹೇಳವ್ವ! ಬಿನ್ನವಿಸುವೆ.
ಎಂದು ಮಂಗಲ ನಿನ್ನ ದೇವಗರ್ಭಕೆ – ಇನ್ನೂ
ಮೊದಲಗಿತ್ತಿಯಂತೆ
ಮೊರೆಯುತಿಹೆ!

— ಅಂಬಿಕಾತನಯದತ್ತ.

---

# ಮಾಯಕದ ಮಸಣ

ನರರ ಜೀವಿತ ನದಿಗಳಲೆಯುತ
ಮಸಣ ಶರಧಿಯ ಹೊಗುವವು
ಜಗದ ವಿಭವಗಳೆಲ್ಲ ಭೀಕರ
ತೆರೆಯ ಹೊಡೆತಕೆ ಸಿಗುವವು
ಹರಿವ ಹೊಳೆಗಳು ತೋಡು ತೊರೆಗಳು
ಚಿಗಿದು ಚಿಮ್ಮುತ ಬರುವವು
ದೀನ ಧನಿಕನ ಭೇದವೆಣಿಸದೆ
ಸಾವ ಸಮತೆಯ ತರುವವು!

ಲೋಕವೆಂಬುದು ನಾಕಕೇರುವ
ಕಠಿನತರ ಕಿರುದಾರಿಯು
ಸಾರಿಹೋಗಲು ಕಠಿನವಾದರು
ದಾರಿ ತಪ್ಪದ ಕೇರಿಯು
ಬುವಿಯ ಮಾರ್ಗದಿ ನರನ ಜೀವಿತ
ನಿಲ್ಲಲಾಗದ ಓಟವು
ಓಡುತೋಡುತ ಮತ್ತೆ ಮಸಣದಿ
ಅಂತ್ಯವಾಗುವ ಆಟವು!

ಚೆಲುವ ಕೆಂದುಟಿ ಸೊಗದ ಕೃಶಕಟಿ
ನುಡಿದ ನುಡಿಗಳ ಮಧುರತೆ
ನಡೆಯ ಸಡಗರ ಬೆಡಗ ನುಣ್ಮೊಗ
ಹಾಡು ಕೊರಳಿನ ಮಧುರತೆ
ಕಣ್ಣನೋಟವು ಕುರುಳಿನಾಟವು
ಬಣ್ಣವೇರುವ ಮೋರೆಯು
ಮಸಣದೇಣಿಯ ಮೆಲ್ಲನೇರಲು
ಕಣ್ಣಕುಕ್ಕುವ ಕೋರೆಯು!

ಕಾಮಕಾಂಚನ ಬಯಕೆ ಮಸಣವು
ತೆಗೆದು ತೋರುವ ಆಸೆಯು
ಸಗ್ಗಕೇರುವ ಬಿಡದೆ ಮಸಣಕೆ
ಜಗ್ಗಿ, ಕಟ್ಟುವ ಪಾಶವು.
ನರನ ಓಟದಿ ನರಕವೆಂಬುದು
ಮಸಣವೊಡ್ಡಿಹ ಜಾಲವು.
ಹೆಜ್ಜೆ ತಪ್ಪುತ ಬಲೆಗೆ ಬೀಳಲು
ಲೋಭ ಮೋಹವೆ ಮೂಲವು!

ಭವದ ಜೀವನ ನದಿಯ ದಾಟಲು
ಕಡವಿನಂತಿದೆ ಮಸಣವು
ಕಡವ ದಾಟುತ ಪಡವ ಸೇರಲು
ದೋಣಿಯಾಗಿದೆ ದಾನವು
ಸತ್ಯ, ಸಾಧನ, ಶ್ರದ್ಧೆ ಪಾತಿಗ
ಕೇಳಿಕೊಳ್ಳುವ ಸುಂಕವು
ಮಣ್ಣು ಹೊನ್ನಿನ ತುಚ್ಛ ತಳಕಿನ
ಲೇಕೆ ಲೋಕಕೆ ಬಿಂಕವು?

ಕೋಟಿ ಕೊತ್ತಲ ಮಂದಿ ಮಾರ್ಬಲ
ಬೀರ ಬಂಟರ ತೋಳ್ಬಲ
ನೂರು ಜೋದರ ಎದುರು ಜಗ್ಗದೆ
ಕಾದಿ ಬೀಳುವ ಆ ಛಲ!
ಶೌರ್ಯ ಸಾಹಸ ನಿಶಿತ ಕೂರಸಿ
ಸಾವಿನೆದುರಿಗೆ ನಿಷ್ಫಲ!
ಮಸಣದಾಳಿನ ಕರೆಯ ಕೂಗಿಗೆ
ಎದುರು ನಿಂತರೆ ಏಂ ಫಲ?

**ನೂ**ರು ವರುಷದ ದಾರಿಯಾಚೆಯ
  ಮಸಣ ಸಂತೆಗೆ ಪಯಣವು!
ಪಯಣದಂತ್ಯಕೆ ಶೋಕ ಸಂಶಯ
  ಶರದ ಮಂಚದಿ ಶಯನವು!
ಬೇಸೆ ಬೇಗುದಿ ಜಿನಸು ಕೊಳ್ಳಲು
  ಸಾವಿನಂಗಡಿ ಸುಲಭವು!
ಕೊಂಡ ಜಿನಸನು ಹಿಂದೆ ದೂಡಲು
  ಕೊಳ್ಳುವವರಾರಿಲ್ಲವು!

**ಮ**ಸಣವೆಂಬುದು ದಾರಿತೋರದ
  ಮಾಯದರಮನೆಯಾಗಿದೆ!
ಯಾತ್ರೆಗೆದ್ದಿಹ ಜನರು ತಂಗುವ
  ಧರ್ಮಛತ್ರದ ಹಾಗಿದೆ!
ಮಡಿದ ಮಾನವ ಕುಲವು ಕೂಡುವ
  ಸಭೆಯ ಮಂಟಪವಾಗಿದೆ
ಲೋಕದಿಂದಲಿ ನಾಕನರಕಕೆ
  ಸಂಕ ತೂಗಿದ ಹಾಗಿದೆ.

—ಸೇಜಾವರ ಸದಾಶಿವರಾವ್.
ಮಿತ್ರಮಂಡಲಿ.

# ಭರತಮಾತೆಯ ವಾಕ್ಯ

(೧೯೧೪)

ಭರತಮಾತೆಯೆ, ಭರತಮಾತೆಯೆ ಎಂದು ನೀ ತಲೆಯೆತ್ತುವೆ?
ಎಂದು ಲೋಕದ ಜನರ ಹೃದಯದಿ ನಿನ್ನ ಮಹಿಮೆಯ ಬಿತ್ತುವೆ?
ಎಂದು ಮಲಿನತೆ ನೀಗುವೆ—ಮಗು
ಳೆಂದು ನಗುಮುಖವಾಗುವೆ?

ಯಾರು ಮುಸುಕಿದ ಕಣ್ಣ ಮಂಜನು ತೆಗೆದು ಬೆಳಕನು ಬಿಟ್ಟರೋ,
ಯಾರು ಜಾಡ್ಯವ ಹರಿಸಿ ನಮ್ಮಲಿ ಹೊಸದು ಜೀವವನಿಟ್ಟರೋ,
ಅವರ ಕಣ್ಣನು ಹಿರಿವರೇ—ಕುದಿ
ದವರ ಕೊರಳನು ಮುರಿವರೇ!

ಎಲ್ಲಿ ಧರ್ಮವ ಕಂಡು ಸಾರಿದ ನಿನ್ನ ಪೂರ್ವದ ಋಷಿಗಳು?
ಎಲ್ಲಿ ಘನತೆಯ ಬದುಕ ಹಾಡಿದ ನಿನ್ನ ಸತ್ವದ ಕವಿಗಳು?
ಎಲ್ಲ ಧರ್ಮದ ಧಣಿಗಳು—ಅವ
ರೆಲ್ಲ ಜ್ಞಾನದ ಕಣಿಗಳು?

ಎಲ್ಲಿ ಕಲೆಗಳ ಬೆಳಸಿ, ಲಕ್ಷ್ಮಿಯನೊಲಿಸಿ ನಿಲಿಸಿದ ಧೀರರು?
ಎಲ್ಲಿ ರಾಜ್ಯವ ಕಟ್ಟಿ, ಶಾಂತಿಯ ಪ್ರಜೆಗೆ ಬೀರಿದ ವೀರರು?
ಎಲ್ಲಿ ಆರ್ಯರ ರಾಜರು—ಈ
ಗೆಲ್ಲಿ ಸಾಹಸ ತೇಜರು?

ಭರತಮಾತೆಯೆ, ಭರತಮಾತೆಯೆ, ನಮ್ಮ ಹಂಬಲು ಕೇಳದೆ?
ದೇವಿ, ಮೌನವಿದೇನು, ಭಕ್ತರು ನಮಗೆ ನೀತಿಯ ಹೇಳದೆ?
ಎಂದು ಮಕ್ಕಳಿಗೊಲಿಯುವೆ—ನುಡಿ,
ಎಂದು ನಮ್ಮಲಿ ನಲಿಯುವೆ?

**ನಿ**ನ್ನ ಧರ್ಮದ ದಿವ್ಯಪಥದಲಿ ಬದುಕ ತಿದ್ದದೆ ಹೋದೆವು;
ನಿನ್ನ ಸೇವೆಯ ಮರೆತು ನಮ್ಮಲಿ ಹೋರಿ ಸೋತವರಾದೆವು;
ನಿನ್ನ ಹೆರರಿಗೆ ಕೊಟ್ಟೆವು—ನೀ
ನಿನ್ನು ಸಾಕದೆ ಕೆಟ್ಟೆವು.

**ನ**ಮ್ಮ ಮನೆಯಲಿ ನಾವು ಹೆರರಿಗೆ ದುಡಿವ ತೊತ್ತುಗಳಾದೆವು;
ನಮ್ಮ ಹಿರಿಯರ ಪುಣ್ಯಕೀರ್ತಿಯನುಳಿಸಿಕೊಳ್ಳದೆ ಹೋದೆವು;
ನಮ್ಮ ಬಾಳಿಸು, ಕೂಡಿಸು—ಸಲ
ಹಮ್ಮ, ಸದ್ಗತಿ ನೋಡಿಸು.

—**ಮ**ಕ್ಕಳಿರ, ಅಕ್ಕರೆಯ ಮಕ್ಕಳ, ಹೆತ್ತ ಕರುಳನು ಮರೆವೆನೆ?
ಸೊಕ್ಕಿ ಸೆಡೆದವರೀಗ ತಿಳಿದಿರಿ, ಇನ್ನು ನಿಮ್ಮನು ತೊರೆವೆನೆ?
ಕೇಳಿ, ಎದೆಯಲಿ ಹದಿಯಿರಿ—ಹೊಸ
ಆಳ ಬಾಳಲಿ ಹುದಿಯಿರಿ.

**ದೇ**ವಸನ್ನಿಧಿಯಿಂದ, ಮಕ್ಕಳ, ಮೊದಲು ಧರ್ಮವ ತಂದೆನು;
ಜೀವಕಲೆಗಳ ಕಲಿಸಿ ಸುಖದಲಿ ಸೊಬಗ ಬೆಳಸುತ ಬಂದೆನು;
ಹಿಮದ ಗಿರಿಯಲಿ ಸುಳಿದೆನು—ಕುಡಿ
ನಿಮಿರಿ ತೆರೆಗಳ ತುಳಿದೆನು.

**ಹೊ**ಳೆದ ಸತ್ಯವ ಹಿಡಿದು ಮುಂದಕೆ ನೂಕಲಮ್ಮದೆ ಸೆಡೆದಿರಿ;
ಹಳದನೆಮ್ಮುತ ಜಾತಿಮತಗಳ ಮದದ ಗುಹೆಯಲಿ ಕೆಡೆದಿರಿ;
ಬಯಲ ಬೆಳಕಿಗೆ ಮುಳಿದಿರಿ—ಸಮ
ದಯದ ನಡತೆಯ ಹಳಿದಿರಿ.

**ಮ**ತ್ತೆ ಮತ್ತೊಡಹುಟ್ಟನೊಲುಮೆಯನೂರೆವ ಗುರುಗಳನಿಳುಹಿದೆ;
ಒತ್ತಿ ಗಡಿಗಳ ಹಲವು ನಾಡನು ಬೆಸೆವ ರಾಜರ ಕಳುಹಿದೆ;
ಮರುಗಿ ಆಗೆಚ್ಚತ್ತಿರಿ—ಮ
ತ್ತೊರಗಿ ಮುಸುಕನು ಹೊತ್ತಿರಿ.

## ಕಾವ್ಯಸಾಮ್ರಾಜ್ಯ

**ಕಾ**ವಲೊಡೆದೆನು, ಪಡುವ ಕಣಿವೆಯ ತೆರೆದು ಸುರಿದನು ದಳವನು
ದೈವಭಕ್ತಿಯ, ಭ್ರಾತೃಧರ್ಮದ, ಧೀರ ಮುಸ್ಲಮ ಕುಳವನು—
ಚಿಮ್ಮಿ, ಕೆರಳಿಸಿ, ಕಲೆತರು—ಅಹ!
ನಿಮ್ಮ ಸಮುಕೇ ಮಲೆತರು.

**ಕ**ಡೆಗೆ ನೆನೆದನು ನನ್ನ ಮನೆತನ ನೇರವಾಗುವ ತೆರವನು,
ಕಡಲರಾಣಿ ಬ್ರಿಟಾನಿಯಳ, ನನ್ನಿನಿಯ ತಂಗಿಯ ನೆರವನು:—
ಗೆಲಿದು ನಾಡನು ಬೆಸೆದಳು—ನೇ
ಮೊಲುಮೆ ಕಟ್ಟನು ಹೊಸೆದಳು.

**ಸ**ಕಲ ಧರ್ಮದ ತಿರುಳ ಹೊರೆದಳು, ಸಕಲ ಜ್ಞಾನವ ತೆರೆದಳು,
ಸಕಲ ಸೀಮೆಯ ಬಳಕೆಗೆಳೆದಳು, ಸಕಲ ಕುಶಲವನೊರೆದಳು:—
ಅವಳ ಗುಣವನು ಮೆರೆಯಿರಿ—ಕಳೆ
ದವಳ ಕೊರತೆಯ ಮರೆಯಿರಿ.

**ಮು**ರಿಯಲಾಕೆಯ ವ್ರತವನಸುರರ ಮಕ್ಕಳುರಿದುರಿದೆದ್ದರು;
ಹರಡಿ ನೆಲಸಿದ ಮಗಳ್ದಿರಣುಗರು ತಾಯ ಕಾಯುತ ಬಿದ್ದರು;
ಅವರು ಮಡಿದೆಡೆ ಮಡಿಯಿರಿ—ಬಿಡ
ದವರು ಹಿಡಿದುದ ಹಿಡಿಯಿರಿ.

**ಹಿ**ರಿಯ ಸಿರಿಯೊಕ್ಕಲಲಿ ಹೊಕ್ಕಿರಿ, ನಂಟನಳಿಯದೆ ಬಲಿಯಿರಿ;
ಅರುಹಿ, ನಯದಲಿ ಹೋರಿ, ನಂಬಿಸಿ, ಮನೆಯನಾಳಲು ಕಲಿಯಿರಿ:
ಶಿಷ್ಟಮಾರ್ಗದಿ ನಡೆಯಿರಿ—ನಿ
ಮ್ಮಿಷ್ಟಸಿದ್ಧಿಯ ಪಡೆಯಿರಿ.

**ಮ**ರಳಿ ಸುಗುಣರ ಕಾರ್ಯದಕ್ಷರ ಹೆತ್ತು ಕೊರಗನು ತಳ್ಳುವೆ;
ಮರಳಿ ಮಹಿಮೆಯ ತೋರಿ ಲೋಕದ ಜನದ ಪೂಜೆಯಕೊಳ್ಳುವೆ;
ಮಕ್ಕಳಿರ, ನಿಮಗೊಲಿಯುವೆ—ನಿ
ಮ್ಮಕ್ಕರೆಗೆ ಮಿಗೆ ನಲಿಯುವೆ.

**ಧ**ರ್ಮ ಶಾಂತಿ ಸ್ವತಂತ್ರವಲ್ಲವೆ ನಮ್ಮ ಹಿರಿಯರ ನುಡಿಗಳು?
ಧರ್ಮ ಶಾಂತಿ ಸ್ವತಂತ್ರವೇ ನನ್ನಿನಿಯ ತಂಗಿಯ ಮುಡಿಗಳು.
ಕೂಡ ಲೋಕವ ಕಾಯುವ—ಯುಕ
ಗೂಡಿ ಮುಕ್ತಿಗೆ ಹಾಯುವ!

**ಭ**ರತಮಾತೆಯೆ, ಭರತಮಾತೆಯೆ, ನಿನ್ನ ಮಾತನು ಮರೆಯೆವು:—
ಹಿರಿಯಬಳಗದ ಕಾರ್ಯಚತುರೆಯ ಸಾಕು ತಾಯಿಯ ತೊರೆಯೆವು;
ಒಂದೆ ಜನವಾಗಿರುವೆವು—ಒಲಿ
ಮೊಂದೆ ಭಾರವ ಹೊರುವೆವು.

**ನಿ**ನ್ನ ಹಿಂದಿನ ಭಾಗ್ಯವೆಲ್ಲವ ಮರಳಿ ಸಾಧಿಸಿ ಮೆರೆವೆವು;
ನಿನ್ನ ಧರ್ಮಾಮೃತವ ಶೋಧಿಸಿ ಬರಡುಲೋಕಕ್ಕೆರೆವೆವು;
ದೈವಚಿತ್ತದಿ ನಿಲುವೆವು—ಸ
ತ್ಸೇವೆಗೆಯ್ಯುತ ಸಲುವೆವು.

ಶ್ರೀ—ಇಂಗ್ಲಿಷ್ ಗೀತಗಳು.

---

# ರೈತನ ಗೋಳು.

ಪೇಳುವುದಾರಿಗೆ ಗೋಳನ್ನು!
ಕೇಳುವ ಜನರನು ನಾ ಕಾಣೆ!!
ತಿರೆಯೊಳು ಸಿರಿಯಿಂ ಜಿರಿತಿಹರು
ಮಲೆತಿಹ ಮದಗಜದಂತಿಹರು
ತುಳಿಯುತ ಒಕ್ಕಲ ಮಕ್ಕಳನು
ಗಳಪುತ ಸೆಳೆಯುತ ಭೂಮಿಯನು
ಒಕ್ಕಲ ಮಕ್ಕಳು ಹೆಕ್ಕಳದೆ
ಕಳೆಯುವ ಬಾಳುವೆ ಬೈತಿಹುದು
ಸಂಸರ ಬೆಂಗಗೆ ಬಳಲದಿಹ
ಕಾಯವು ಕೊರಗಿತು ಸಿರಿಸರೆಗೆ
ಹಳ್ಳಿಯು ಪಳ್ಳಿಯ ಸುಖಜನವು
ಸಾಲದ ಶೂಲದ ನೆಳಲಲ್ಲ
ನೆಲಸಲು ನೆಲವೇ ಕಾಣದಿರೆ
ಹೊಟ್ಟೆಯು ಬಟ್ಟೆಯು ತೋರದಿರೆ
ಮನಕದು ಮನ್ನಣೆ ಮಾಡದಿರೆ
ಸಿರಿವನೆ ಸರೆವನೆ ಸಾರಿದನು
ತಿರೆಯನು ಕೋರಿಗೆ ಕೋರಿದನು.
ಗೇಣಿಗೆ ಗೋಣನು ಕಟ್ಟಿದನು
ಮಾರಿಯ ಮೋರೆಯ ಮೆಟ್ಟಿದನು
ಪೇಳುವುದಾರಿಗೆ ಗೋಳನ್ನು!
ಕೇಳುವ ಜನರನು ನಾ ಕಾಣೆ!!

ಮೆಲುನುಡಿ ಬಿರುನುಡಿ ಬಿಡುವಿನಲಿ
ಸೀಡಿದ ಬೇಟದ ಬಲೆಯಲ್ಲಿ
ಎರೆಯನು ಸೇರಿಸೆ ರೈತನನು

ಮರಳಿದ ಮನದನುತಾಪದಲಿ
ಮುಂದಿನ ಬೆಳೆಯನು ಮುಡುಪಿಟ್ಟು
ಇಂದಿನ ಕಾಳಿನ ಇರ್ಮುಡಿಗೆ
ತಂದುಣ್ಣುವ ಸೊಗ ಬಗೆಬಗೆದು
ಸಂದಿತು ಸಮಯವು ಎಂದೆನದೆ
ಇಂದಿನ ಸಾವನು ಮುಂದೊತ್ತಿ
ಒಂದಕೆ ಎರಡನು ಬರೆದಿತ್ತ
ಮರುಗುವ ರೈತನ ನೋಡತ್ತ!

ಬಾಳಿಕೆ ಬಾರದ ಆವುಗಳು
ಬಾಳಿನ ಕೊರಳನು ಕೊಯ್ಯುತಿರೆ
ತುರುಗಳ ತರುತಿಹ ಧನನಿಧಿಗೆ
ತರಳನ ತರಳೆಯ ಲಗುನಕ್ಕೆ
ತನ್ನಯ ಹೊಲವನು ಅಡವಿಟ್ಟು
ನೀಗದ ಸಾಲದ ಹೊರೆಹೊತ್ತು
ತೀರದ ಬಡ್ಡಿಗೆ ಹಣತೆತ್ತು
ಸಾಲದ ಬೇಗೆಗೆ ಬೇಯುತಿಹ
ಕೊನೆಯಲಿ ಹೊಲವನು ಮಾರುತಿಹ
ಸಾವಿನ ಬರವನು ಬಯಸುತಿಹ
ಮಿಡುಕುವ ರೈತನ ನೋಡಲ್ಲಿ!

ಸೈರಣೆಗೊಳ್ಳುವ ಸತಿಮಣಿಯ
ಮುದ್ದಿನ ಮಕ್ಕಳ ಮೈಸಿರಿಯ
ಹೊಲಬಿಗ ಬಾಲೆಯ ಮೈಸೊಬಗ
ನಾಣನು ಮುಚ್ಚಲು ಬಟ್ಟೆಗಳ
ಮೇಣದೂ ಕಾಣದೆ ಕೊರಗುತಿಹ
ಹೂಣಿಗ ರೈತನ ಕಾಣಲ್ಲಿ!

ಹಡೆದಿಹ ಹಿರಿಯರ ಕೋಟಲೆಗೆ
ಮಡದಿಯ ಮಕ್ಕಳ ಮದ್ದಿಂಗೆ
ದೂರದ ಇರುತಿಹ ವೈದ್ಯನನು
ಸಾರುತ ಮೊರೆಯಿಡೆ ಹಣವನ್ನು
ಸೂರೆಯ ಗೆಯ್ಯಲು ಬರುತಿಹನು
ಕರುಳಿನ ಪಾಶವ ಬಿಟ್ಟಿಹನು
ಕುಳಿತರೆ ನಿಂತರೆ ದುಡ್ಡಿಹುದು
ಮಡ್ಡಿಗೆ ಮಾರುವ ಮದ್ದಿಹುದು
ಬಡ್ಡಿಯ ದುಡ್ಡಿಗೆ ಗತಿಯಿಲ್ಲ
ಬಾಳಿನ ಕೂಳಿಗೆ ಮೊದಲಿಲ್ಲ
ಆದರಿಂ ಕೋಟಲೆ ಕುತ್ತುಗಳ
ತುದಿಮೊದಲಿಲ್ಲದ ತೊಳಲಿಕೆಗೆ
ನರಳುವ ಹೊರಳುವ ಒಕ್ಕಲನು
ನಡೆನಡೆ ನೋಡದೊ ದೂರದಲಿ!

ಹಳ್ಳಿಯ ಮುರುಕರು ಹಳ್ಳಿಗರ
ಸದನದ ಸಿರಿಸಂಪತ್ತುಗಳ
ಸೆಳೆವ ವಕೀಲರ ದೇಸೆಗಳ
ಸವಿಸವಿ ಮಾತಿನ ಜೋಡಣೆಯ
ಕಲಿಯುತ ಹಳ್ಳಿಗಳಲೆಯುತಲಿ
ಕಲಹವ ಬೀರುತ ಬೆಳ್ಳಗೆಯೊಳ್
ನಾಡಲಿ ನಟ್ಟಿಹ ನಂಬುಗೆಯ
ನೆಗೆನೆಗೆದೋಡಿಸಿ ಕದನದಲಿ
ಮಿಗೆಮಿಗೆ ನ್ಯಾಯದ ಸದನದಲಿ
ಬಾಳುವೆ ಬದುಕನು ಬಲಿಗೊಳ್ವ
ಒಕ್ಕಲ ತಂಡವ ನೋಡಲ್ಲಿ!

## ಕಾವ್ಯಸಾಮ್ರಾಜ್ಯ

ಪುರಜನ ವ್ಯಸನವು ಬಳಿಸಾರಿ
   ಹರಡುತ ಹಳ್ಳಿಗರನು ಕೂಡಿ
      ಹಿಂದಣ ಹಿಡಿತದ ವೆಚ್ಚವನು
ಮುಂದೆಳೆದೋಡಿಸಿ ಒಡನಾಡಿ
   ನಾಡಿನ ಸಗ್ಗವ ಪಾಳ್ಗೆಯ್ದು
      ಬೇಡಿಪ ರೈತನ ನೋಡಲ್ಲಿ!

ಶಿಕ್ಷಣ ಹೊಂದಿದ ಕೆಲಜನವು
ನೀತಿಯ ನೇಮವ ತೆಗೆದೊಗೆದು
ಸತಿಸುತೆಹಿತೆಯರ ಶೀಲವನು
   ಬಿರುದಿಗೆ ಸೂರೆಯ ಗೆಯ್ವವೊಲು
      ಬಿರುದಿನ ಸಿರಿಗರ ಸೆಳವಿನೊಳು
ಸತಿಸುತೆಹಿತೆಯರ ಮಾನವದು
   ಮಸಣವ ಕಾಣಲು ಬಲುಮೆಯೊಳು
      ಮಿಡುಕುವ ಮಣ್ಣಿನ ಮನುಜನಿಗೆ
ಸದನವ ಸೇರಲು ಸೆರೆಯಾಯ್ತು
   ಪೇಳುವುದಾರಿಗೆ ಗೋಳನ್ನು!
      ಕೇಳುವ ಜನರನು ನಾ ಕಾಣೆ!!

ಸಮತಾವಾದಿಯ ದಿನವೊಲಿದು
ಸಮನಿಸ ಜಂಬೂದ್ವೀಪಕದು
ಒಕ್ಕಲ ಸಂಘಗಳೊತ್ತರದೆ
   ಒತ್ತುವ ಬೇಗೆಗೆ ಭೋರ್ಗರೆದು
      ಮೊಳೆಯಲು ಬೆಳೆಯಲು ಕಳೆವೆತ್ತು
ಗಳಿಕೆಯ ಬಾಳಿಗೆ ಬೆಲೆವೆತ್ತು
   ಉಚಿತದ ಬಲುಮೆಯ ಶಿಕ್ಷಣದೆ
      ಮುಕುತಿಯ ಮಾರ್ಗವ ಮನಕಿತ್ತು

ಕೀಳ್ಮೇಲೆನ್ನುವ ಭಾವನೆಯು
ಕೇಳಿಯು ಬೇರ್ಗೊಲೆ ಗೆಯ್ಯುತಲಿ
ಬವರದ ಬಯಕೆಯು ಕೂರ್ಮೆಯಲಿ
ಹಾರಿಸಿ ಹಳಿಯುತ ಗೆಯ್ಮೆಯಲಿ
ಜೀವನ ಧರ್ಮವು ನೇಹದಲಿ
ನೆಲಸಿರೆ ನಾಡಿನ ಜನರೆಲ್ಲ
ನಾಡಿನ ಜೀವಿಗೆ ಪಾಡುತಲಿ
ಜೀವಿಯು ನಾಡಿಗೆ ಆಡುತಲಿ
ಮಿಾಸಲವೀಯುತ ಮನವೊಲಿದು
ಹಳ್ಳಿಯ ಸದನವ ಸುಮನಸರ
ಸದನಕೆ ಸಾಸಿರ್ಮಡಿಮಾಡಿ
ಸಗ್ಗವೆ ಹಿಗ್ಗಿದ ಹಳ್ಳಿಯಿದೊ
ಮುಗ್ಗಿತು ಮೊದಲಿನ ತಾಪವದೊ
ಎನುತಲಿ ಸಾರುತ ಬರುತಿರುವ
ದಿನಗಳ ಬರವನೆ ಹಾರೈದು
ಮರುಗುತ ಮಿಡುಕುತ ವ್ಯೆಮರೆದೆ
ಪೇಳುವುದಾರಿಗೆ ಗೋಳನ್ನು!
ಕೇಳುವ ಜನರನು ನಾ ಕಾಣೆ!

—ಸ. ಪ. ಗಾಂವಕಾರ.

# ನಿಟ್ಟುಸಿರು

ಒಕ್ಕಿಂತೆಯು ಮುಡಿದಿಹ ವಿಧವಿಧ ಸುಮಗಳ
ಸಂತೆಯೊಳಿಲ್ಲಿಯು ಸುಳಿಸುಳಿದು,
ಎಂತಹುದೋ ಹೊಸಕಂಪನು ಹರಡುತೆ
ಬಂತೈ ಗಾಳಿಯ ತೆರೆಯೊಂದು;
ಅದಕೆಂದಿತು ಜನ 'ನಿಟ್ಟುಸಿರು'
ಶಾಂತಿಯ ಮೊಳೆಗಾಯ್ತದು ಕಸರು.

ಕಡಲಿನ ಕಡೆಹದ ಸಮಯದಿ ಹಾವುಗ-
ಳೊಡೆಯನು-ವಾಸುಕಿ-ಬಲುನೊಂದು
ಬಿಡದೆ ಫೂತ್‌ಕರಿಸೆ ಅದನಾಶಾವಧು
ಹಿಡಿದು ಕೊಳಲ ಮಾಡಿದಳಂದು;
ಆ ಕೊಳಲುಲಿಯೇ 'ನಿಟ್ಟುಸಿರು'
ನಲಿವಿನ ಬೆಳೆಗೆರೆವುದು ಎಸರು.

ಹಸಿವೆಯ ರಾಣಿಯು ಹಗೆಗಳ ಗೆಲ್ಲುತೆ
ವಶಗೊಳ್ಳುತೆ ದಶದಿಶೆಗಳನು,
ಜಸವರೆ ಬಾಜಿಸಿ ಬಿನದಿಸುತಿರುವಳು
ಪಸರಿಸಿ ನಗೆ-ಬೆಳುದಿಂಗಳನು;
ಹಸಿವೆಯ ನಗೆಯಿದು 'ನಿಟ್ಟುಸಿರು'
ಬಾಳಿನ ಬೇಹಾರದ ಕೊಸರು.

ಕೆಳವಳಗಬ್ಬಿಗ ಕರುಣಾರಸವದೆ
ತುಳುಕುವ ಕವನವ ಬರೆದಿರುವ,
ತಿಳಿದವರೆಂಬರ ತಿಳಿಯದರೆಂಬರ
ಹೃದಯುವ ಹಿಡಿದಲುಗಾಡಿಸುವ;

ಆ ಕವನಕೆ ಹೊಸ ಹೊಸ ಕುಸುರು
ಹಾಕಿದೆ ಇದೆ ಈ 'ನಿಟ್ಟುಸಿರು.'

ಅನ್ನದ ದೈವವ ಮೆಚ್ಚಿಸಿಕೊಳ್ಳುವೆ-
ವೆನ್ನುತೆ ಜೀವರ ಬಳಗವದು
ಬಿನ್ನಾಣದ ಮಂತ್ರಗಳಲಿ ಪೂಜಿಸಿ
ತನ್ನಯ ಮೈ ಸವೆಯಿಸುತಿಹುದು.
ಪೂಜೆಯ ಮಂತ್ರದ ಕೊನೆಯುಸಿರು
ಸಾಜವು ಅಹುದಿದೆ 'ನಿಟ್ಟುಸಿರು!'

— ಆನಂದಕಂದ.

# ಹುತ್ತರಿ ಹಾಡು

ಎಲ್ಲಿ ಭೂರಮೆ ದೇವಸನ್ನಿಧಿ ಬಯಸಿ ಬಿಮ್ಮನೆ ಬಂದಳೋ?
ಎಲ್ಲಿ ಮೋಹನ ಗಿರಿಯ ಬೆರಗಿನ ರೂಪಿಸಿಂದಲಿ ಸಿಂದಳೋ?
ಎಲ್ಲಿ ಮುಗಿಲಲಿ ಮಿಂಚಿನೋಲ್ ಕಾವೇರಿ ಹೊಳೆ ಹೊಳೆಹೊಳೆವಳೋ?
ಎಲ್ಲಿ ನೆಲವನು ತಣಿಸಿ ಜನಮನ ಹೊಲದ ಕಳೆ ಕಳೆಕಳೆವಳೋ?
ಅಲ್ಲೆ ಆ ಕಡೆ ನೋಡಲಾ!
ಅಲ್ಲೆ ಕೊಡಗರ ನಾಡಲಾ!
ಅಲ್ಲೆ ಕೊಡವರ ಬೀಡಲಾ!

ಏವಿದು ಮೆದ್ದರೊ ಯಾರು ಪೂರ್ವದಿ ಹುಲಿಯ ಹಾಲಿನ ಮೇವನು?
ಕವಣೆ ತಿರಿ ಕಲ್ಲಾಟ ಹಗ್ಗಕೆ ಸೆಳೆದರೋ ಹೆಬ್ಬಾವನು?
ಸವರಿ ಆನೆಯ ಸೊಂಡಿಲಿನ ರಣಕೊಂಬನಾರ್ ಭೋರ್ಗರೆದರೋ?
ಸವೆದು ಸವೆಯದ ಸಾಹಸತ್ವದ ಕ್ಷಾತ್ರ ಬೇಟೆಯ ಮೆರೆದರೋ?
ಅವರು ಸೋಲ್ ಸಾವರಿಯರು!
ಅವರೆ ಕಡುಗಲಿ ಗರಿಯರು!
ಅವರೆ ಕೊಡಗಿನ ಹಿರಿಯರು!

ತಮ್ಮ ನಾಡಿನ ಕೊರಳು ದಾಸ್ಯದ ನೊಗದ ಭಾರಕೆ ಬಗ್ಗದೋಲ್,
ಹೆಮ್ಮೆ ಹಗೆಗಳ ಹೊಡೆದು ಹಿರಿಯರು ಹಸಿದು ಹಾರುವ ಬಗ್ಗದೋಲ್.
ಬೊಮ್ಮಗಿರಿಯಿಂ ಪುಷ್ಪಗಿರಿಪರ್ಯಂತ ಬೆಳೆದೀ ದೇಶವು
ಧರ್ಮದಾನದ ಕಟ್ಟುಕಟ್ಟಳೆ ರೀತಿನೀತಿಯ ಕೋಶವು!
ನಮ್ಮ ಕೊಡಗಿದು ಜಮ್ಮದು;
ಜಮ್ಮ ಕೊಡಗಿದು ನಮ್ಮದು;
ನಮ್ಮೊಡಲ್ ಬಿಡಲಮ್ಮದು!

ಇದು ಅಗಸ್ತ್ಯನ ತಪದ ಮಣೆ, ಕಾವೇರಿ ತಾಯ ತವರ್ಮನೆ,
ಕದನಸಿರಿಗುಯ್ಯಾಲೆ ತೂಗಿದನಿಲ್ಲಿ ಚಂದರವರ್ಮನೆ!

## ಕಾವ್ಯಸಾಮ್ರಾಜ್ಯ

ಇದಕೊ! ಚೆಂಗಾಳ್ವರಸರಾಡಂಬರವು ಕುಣಿದ ಶ್ರೀರಂಗವು!
ಇದೊ! ಇದೋ! ಇಲ್ಲಿರುಳ್ದ ಹಾಲೇರಿಯರ ಬಲಗಿರಿ ಶೃಂಗವು!
ವಿದಿಯು ಮಾಟದ ಕೊಡಗಿದು!
ಮೊದಲೆ ನಮ್ಮದು, ಕಡೆಗಿದು
ಕದಲದೆಮ್ಮನು; ಬೆಡಗಿದು!

ಒಮ್ಮತವು ಒಗ್ಗಟ್ಟು ಒಂದೇ ಮನವು ಎಲ್ಲಿದೆ ಹೇಳಿರಿ?
ಸುಮ್ಮನಿತ್ತರೊ ದಟ್ಟಿಕುಪ್ಪಸ? ಹಾಡು ಹುತ್ತರಿಗೇಳಿರಿ!
ಚಿಮ್ಮಿ ಪಾತುರೆಕೋಲ ಹೊಯ್ಲಿಗೆ ಕುಣಿವ ಪದ ಹೊರಹೊಮ್ಮಲಿ!
ಅಮ್ಮೆ ಹರಸಿದ ಸೀಮೆ ನಮಗಿದು ಇರಲಿ ನಮ್ಮದೆ ನಮ್ಮಲಿ!
ನೆಮ್ಮದಿಯನಿದು ತಾಳಲಿ!
ಅಮ್ಮೆಯಾ ಬಲ ತೋಳಲಿ
ನಮ್ಮ ಕೊಡಗಿದು ಬಾಳಲಿ!

ಕವಿಶಿಷ್ಯ—ಮೂರನೆಯ ಪದ್ಯಪುಸ್ತಕ.

---

## ಬೈಗು

ಬೈಗು ಬರುವ ವೇಳೆಯಲ್ಲಿ
ಪಡುವ ದಿಕ್ಕಿನಂಚಿನಲ್ಲಿ
ಬಾನು ಬುವಿಯ ಮುಟ್ಟುವಲ್ಲಿ
ಚಿಲುಮೆ ಚಿಮ್ಮಿತು.
ಚಿಮ್ಮಿ ಚಿಗಿದು ಸಂಜೆಗೆಂಪ
ನೆರಚಿ ಸುರಿಸಿತು.

ಮೇಲೆ ಮುಗಿಲು ಸುಳಿಯುವನ್ನ
ಸುತ್ತ ಬೆಳಕು ಹರಿಯುವನ್ನ
ಚಿಲುಮೆ ಚಿಗಿದು ಚೆಲ್ಲಿದರುಣ
ಜಲವು ತಾಗಿತು.
ಗಗನ ಬಾಯ ತೆರೆದುಕೊಂಡು
ಅದನೆ ಕುಡಿಯಿತು.

ಕರಿಯ ಬಿಳಿಯ ಬಟ್ಟೆಗಳಿಗೆ
ಬೆಳ್ಳಿಯಂಚ ಬಿಗಿದು ಕಟ್ಟಿ
ಹೊನ್ನ ಸರಿಗೆ ಹೊಸೆದು ಕಟ್ಟಿ
ಉಟ್ಟ ಮುಗಿಲುಗಳ್
ಬೈಗು ಬಸಿವ ಸೊಬಗನೂಡಿ
ಹರಿಸದಿಂದಿರಲ್

ಚಿಲುಮೆ ಚಿಮ್ಮಿ ತುದಿಯ ತಗುಲಿ
ಮರಳಿ ತಳಕೆ ಧುಮುಕುವಲ್ಲಿ
ಸೊಬಗ ಸೋನೆ ಸುರಿದು ಹರಿದು
ಧರಣಿ ನೆನೆಯಿತು.
ವಿಶ್ವವೆಲ್ಲ ಹೊನ್ನ ಸಲಿಲ
ದಲ್ಲಿ ಮುಳುಗಿತು.

**ಬೇ**ಗ ಎಲ್ಲ ಮುಗಿದು ಹೋಯ್ತು.
ಕಳೆಯ ಮಳೆಯು ನಿಂತು ಹೋಯ್ತು.
ಸೊಗದ ಕಣಿಯ ಚಿಲುಮೆ ಬತ್ತಿ
ಬರಿಯದಾಯಿತು.
ಸುತ್ತ ಹರಿದ ಚೆಲುವು ಹೊನಲು
ಮರೆಯಲಡಗಿತು.

**ಮ**ರೆಗೆ ಸರಿದ ಸಿರಿಯ ನೆನೆದು
ಅದನೆ ಮನದೆ ಸವಿಯುತಿರಲು
ಇರುಳ ಕುರುಳ ಕರಿಯ ನೆರಳು
ಇಳೆಯಲುರುಳಿತು.
ಅಲೆಯು ಕಡಲೊಳುರುಳುವಂತೆ
ಹೊರಳುತರಳಿತು.

**ನಿ**ದ್ದೆಗಳೆದು ಬಂದು ನಿಶಿಯು
ಕಣ್ಣು ಹೊಸಗಿ ನೋಡುತಿರಲು
ಮರೆಯ ತೊರೆದ ಚುಕ್ಕಿಯಂತೆ
ನಯನ ತೋರಲು
ವ್ಯೋಮಭಾಗದಲ್ಲ ತಾರೆ
ಮೂಡಿತೆಂದರು.

**ನಿಂ**ತೆನಲ್ಲಿ ಬಹಳ ಕಾಲ
ತಾರೆಯೆನಿತೊ ಜನಿಸಿತಾಗ
ಸುತ್ತಮುತ್ತ ನೊಲಿಸಿ ನಲಿಸಿ
ಶಶಿಯು ಬಂದನು.
ಆದರೆನ್ನ ಮನದೆ ಮಾತ್ರ
ಸಂಜೆ ಮೆರೆಯಿತು.

'ಬೈಗು' ಹೆಸರು ಕೇಳಿದರೆಯೆ
ಚೆಲುವು ಚಿತ್ರವಿದಿರಿಗಹುದು.
ಕಾಣಬಲ್ಲೆ ಸವಿಯಬಲ್ಲೆ
ಸಂಜೆ ಸಿರಿಯನು.
ಒರೆಯಲಾರೆ ಬರೆಯಲಾರೆ
ಬೈಗ ಸೊಬಗನು.

—ಜಿ. ಪಿ. ರಾಜರತ್ನಂ.

---

# ಮಾಸ್ತಿ (ಮಹಾ ಸತಿ)

ಮಾನ್ಯೆ, ನೀನಾವ ಕುಲದಲ್ಲಿ ಜನ್ಮಿಸಿದೆ?
ಯಾವ ವೀರನ ಮಡದಿಯಾಗಿ ಶೋಭಿಸಿದೆ?
ನಿನ್ನ ಮಾಸತಿಯೆಂದು ಪೂಜಿಸುವರೆಲ್ಲ
ನಿನ್ನ ಹೆಸರನು ಮಾತ್ರ ಹೇಳುವವರಿಲ್ಲ.
ನೀನಾವ ವೀರನನು ಮಂಗಲಾಕ್ಷತೆಯಿಡಿಸಿ,
ಹೂಮಾಲೆಯನು ತೊಡಿಸಿ ಆರತಿಯ ಬೆಳಗಿ,
ಎಂದು ಕಳುಹಿದೆ ರಣಕೆ? ಯಾವ ಅರಿಗಳ ಮುಂದೆ?
ಯಾರ ರಕ್ಷಣೆಗೆಂದು? ಯಾರನುದ್ಧರಿಸೆ?

ಶತ್ರುಗಳು ಅಬಲೆಯರ ಮಾನವನು ಕಳೆದರೆ?
ಶತ್ರುಗಳು ಪ್ರಜೆಗಳನು ಕಡು ಹಿಂಸಿಸಿದರೆ?
ಶತ್ರುಗಳು ಧರ್ಮವನು ಕೆಡಿಸಿ ಪೀಡಿಸಿದರೆ?
ಶತ್ರುಗಳು ಸ್ವಾತಂತ್ರ್ಯ ಹರಣ ಮಾಡಿದರೆ?
ಏತಕೋಸುಗ ರಮಣ ಸಾರಿದನು ರಣಕೆ?
ಎನಿತು ವೀರರನಾತ ಕೆಡವಿದನು ನೆಲಕೆ?
ಯಾರೊಡನೆ ಘನಘೋರ ಸಮರವನು ಗೈದ?
ಯಾರ ಬಾಣಕೆ ಅವನು ವೀರಬಲಿಯಾದ?

ವೀರಸ್ವರ್ಗವನೇರುವಾಗ ಅವನಂದು
ನಿನ್ನ ಕರೆದನೆ-'ಬಾರೆ ಪ್ರಿಯರಮಣಿ' ಎಂದು?
ಏನ ಹೇಳಿದನವನು? ಏತಕೋಸುಗ ನೀನು
ವೀರಪತಿಯೊಡನೆ ಚಿತೆಯೇರಲನುವಾದೆ?
ಹಸುಗೂಸುಗಳು ಬಂದು-'ಅಮ್ಮ ಅಮ್ಮಾ' ಎಂದು
ಕರೆಯಲಿಲ್ಲವೆ,-'ಅಮ್ಮ ಹಾಲನುಣಿಸೆ'ಂದು?

'ಎಲ್ಲಿಗೈದುವೆಯಮ್ಮ? ಏಕೆ ಹೋಗುವೆಯಮ್ಮ?
ಅಪ್ಪ ಬರುವನು ಇಂದು ಹೋಗಬೇಡಮ್ಮ'

ಎಂದು ಅಳಲಿಲ್ಲವೇ? ಯಾರು ತಡೆದಿಲ್ಲವೆ?
ಅಂದಾರು ನಿನ್ನ ಮಾತಾಡಿಸಲೆ ಇಲ್ಲವೆ?
ನೀನು ನೀನೇಯಾಗಿ ರಣಭೂಮಿಯನು ಸೇರಿ
ಪತಿಯನನುಸರಿಸಿದೆಯೆ ದೇಹವನು ತೂರಿ?
ವೈಧವ್ಯ ಜೀವನಕೆ ಬೆದರಿದೆಯೆ ನೀನು?
ವೈರಿಗಳ ಕಾಟಕ್ಕೆ ಭಯಪಟ್ಟೆಯೇನು?
'ಪತಿಪುತ್ರರಿರದ ಜಗದಲಿ ಮಾಡಲೇನು?'
ಎನುತ ಚಿತೆಯೇರಿ ಶಾಂತಿಯ ಪಡೆದೆಯೇನು?

—ಗಣೇಶರಾಮುಯಾಜಿ.

---

# ಧನ್ಯೆ ಸೀತೆ

ಯಾರ ಮಾಸ್ತಿಯ ಕಲ್ಲು
ರಾಮಾಯಣದ ಸೊಲ್ಲು
ನಾಡ ನಾರಿಯರ ಗೆಲ್ಲು

ಯಾರ ಹೆಸರಿನ ಸದ್ದು
ಕವಿಯ ತುಟಿಗಳ ಮುದ್ದು
ಮನದ ಮೈಲಿಗೆಯ ಮದ್ದು

ಯಾರ ಲೀಲೆಯ ನೆನಸು
ದೇವಲೋಕದ ಕನಸು
ನಲ್ಲನಲ್ಲೆಯರ ಮನಸು

ಯಾರ ಕೀರ್ತಿಯ ಹಾಡು
ಕವಿಯ ನಾಲಿಗೆಗೀಡು
ರಾಗರಸಗಳಿಗೆ ಬೀಡು

ಯಾರ ಬಾಳ್ವೆಯ ತೋಡು
ಯೋಗಭೋಗದ ಜೋಡು
ಸಮಸಿರಿಯ ಕಾಡುನಾಡು

ಸೀತೆ ನಿನ್ನೀ ಪಾಡು
ನನ್ನೆದೆಯ ಸವಿಹಾಡು
ನೀನೆ ಕಡು ಧನ್ಯೆ ನೋಡು

—ಮಧುರಚೆನ್ನ.

# ಮಿಂಚುಳ್ಳಿ

ಬಣ್ಣದ ಬಳ್ಳಿ,
ಮರಿ ಮಿಂಚುಳ್ಳಿ,
ನಿನ್ನ ತಾಯಿ ಕಾಮನ ಬಿಲ್ಲೆ?
ನೀಲಿಯೊ ಹಸುರೊ
ಹಳದಿಯೊ ಕಿಸುರೊ
ನಿನಗೀ ಮಿನುಗಾಕೆಯಿಂನಲ್ಲೆ?

ಚಂಚಲವಾಡುವೆ,
ಮಿಂಚಿನೆ ಹಾಡುವೆ,
ಹಾಡೆನೆ ಮಿಂಚುವಿದೇನನುವೊ!
ನೆಟ್ಟನೆ ಹಾರೆ,
ಚಿಟ್ಟನೆ ಚೀರೆ,
ದನಿಯೊ? ಮಿನುಗೊ? ವಿಹಗವೊ? ನೆನವೊ!

ಎಲೆಯ ಕದಲ್ಕೆಯೊ,
ಹಗಲಿನೊಳುಲ್ಕೆಯೊ,
ನೀನೆರಗುವೆ ಬಣ್ಣವ ಬೀರಿ;
ಪುಲಕಿತ ಸಲಿಲವೊ,
ನೆಗೆತಹ ಕಮಲವೊ,
ನೀನೆಗರುವೆ ತಿರ್‍ರನೆ ತೀರಿ.

ಹವಳದ ಪಥದಲಿ
ರಜತದ ರಥದಲಿ
ಹಕ್ಕಿಗಳಿಬ್ಬನಿ ಹಬ್ಬದಲಿ
ಬರವಿನ ರವಿಯ
ಶಬಲಚ್ಛವಿಯ
ಕುದುರೆಯೊ ಕೆಳಿರುವೆ ಕೊಬ್ಬಿನಲಿ.

ನಡುಹಗಲನ್ನ
ಕಾಣದ ನಿನ್ನ
ಕೇಳುವ ಕೇಳಿಯ ಕರ್ಕರವೊ?
ಹಗಲಲಿ ಹೊಂಚು
ಹಾಕದೆ ಮಿಂಚು
ಮರಸಿರೆ ಮೊಳಗುವ ಮರ್ಮರವೊ?

ಕರಗುವ ಹಗಲಿನ
ಮಿರುಗುವ ಮುಗಿಲಿನ
ಬೆರಕೆಯ ಬಣ್ಣದ ಬೆಂಕೆಯಲಿ
ಸಿಡಿತಹ ಮಿಣ್ಣನೆ
ಕಿಡಿಯನೆ ನುಣ್ಣನೆ
ಲಹರಿಪೆ ವಿಹರಿಪೆ ರೆಂಕೆಯಲಿ.

ಸತತ ಯುವತಿಯ
ವಸುಮತಿ ಸತಿಯ
ನವರತ್ನದ ನತ್ತಿನೆ ನಲಿವೆ;
ಗಗನದಿ ಚಚ್ಚರ
ನಗುನುಡಿವಚ್ಚರ
ಲಲನೆಯರುಲಿವೊಲು ಕಿಲಿಕಿಲಿವೆ.

ನೀರವ ನೀರಂ
ಗನೆಗೆ ಸಮೀರಂ
ಮಿಂಚಿ ದೃಗಂಚಲ ಬಾಣವೊ ನೀ?
ಭಾವ ತ್ವರಿತದ
ತಾರ ಸ್ವರಿತದ
ದಕ್ಷರ ಯಕ್ಷರ ವೀಣೆಯೊ ನೀ?

ರಿತುರಿತು ನಿನ್ನ
ಗುರುತಿಸೆ ಬೆನ್ನ
ಕಾಲನ ಲೋಲ ಪತಾಕೆಯೊ ನೀ?
ಹಳುವದ ಹೆಣ್ಣಿನ
ತಿಳಿಗೊಳ ಕಣ್ಣಿನ
ಬಣ್ಣದ ಸಣ್ಣ ಸಲಾಕೆಯೊ ನೀ?

ಮರಕತ ರಂಗದಿ
ಹರುಷ ತರಂಗದಿ
ರಿಂಗಣಗುಣಿವಭಿನೇತನೊ ನೀ?
ಬೆಂಚಿಯ ಬೇಟೆಯ
ಚಂಚುವಿನೀಟೆಯ
ಕುರುಹಿನ ಕಿರಿಯ ಕಿರಾತನೊ ನೀ?

ಬಾಚಿಯೊ ಬೆರಳೊ
ಸೂಚಿಯೊ ಸುರುಳೊ
ಕನಸೊ ನನಸೊ ರಚಿಸಿತು ನಿನ್ನ?
ಕರೆಯಾ ಕಾಕವ
ಬಿಳಿಯ ಬಲಾಕವ
ಮಾಡಿದನೆ ಮಾಡಿದನೆ ಚನ್ನ?

ಹಾರುವೆ, ತೊಳಗುವೆ,
ಹಾಡುವೆ, ಮುಳುಗುವೆ,
ಕಳವಳಿಸುವುದೇನ್ನಿನ್ನೆದೆಯಂ?
ನೆನಸಿನ ನೋವೊ?
ಕನಸಿನ ಕಾವೊ?
ಸಾಕುವೆ ಸಾಕೆನದೇಂ ಬೆದೆಯಂ?

## ಕಾವ್ಯಸಾಮ್ರಾಜ್ಯ

ನಿಭೃತ ನಿಕುಂಜದ
ಪುಷ್ಪಿತ ಪುಂಜದ
ಸರಸಿಯೆ ಸರಿಸವ ಸನ್ನೆಯೆನೆ,
ಓಕುಳಿಸುವೆಯೊ,
ವ್ಯಾಕುಳಿಸುವೆಯೊ,
ವಿಜನ ವನದ ಜಲಕನ್ನೆಯೆನೆ?

ವಿರಹದೊಳವಿತೆಯ?
ಒಗೆತಹ ಕವಿತೆಯ
ಗರಿಗೊಳಿಸಲೊ? ಬರಿದೇಕವಿಯೆ?
ನಿರರ್ಗಲ ಮನವ
ಪರರ್ಗೆರೆವನವ
ವಿರಹಿಯೆ? ಕವಿಯಲ್ಲವೆ? ಕವಿಯೆ!

ಕವಿತಹ ಗುಲ್ಲದು
ಕವಿತೆಗೆ ಸಲ್ಲದು,
ಕವನದ ಭವನವದೇಕಾಂತಂ
ಎಂದದನಾಂತಂ
ದಂದು ನಿಶಾಂತಂ
ಕವನವ ಸವನಿಸುವೇ ಕಾಂತಂ?

ಹರಣವನಿತ್ಯವೊ?
ಮರಣವೆ ಸತ್ಯವೊ?
ಎಂದೆಮಗೊಂದಿರಲೀ ಭೀತಿ,
ಕಾವೊಳು ಹೂತು
ಹೂವೊಳೆ ಜೋತು
ಹುಸಿಹೂವಹವೆಮ್ಮಯ ಗೀತಿ!

**ಕ**ಣ್ಣಿಗೆ ಸೊಂಪೆನೆ,
ಕಿವಿಗಳಿಗಿಂಪೆನೆ,
ಸೊಬಗಿನ ಸಾರಸ್ಯಕೆ ಸಂದು
ತಳೆದಿಹ ನಿನ್ನಯ
ತಿಳಿದವೆ ನನ್ನಿಯ–
ಬದುಕಿನ ಬೆದಕೆನೆ ಸೊಬಗೆಂದು?

**ಸೊ**ಬಗೆನೆ ಸೋऽಹಂ
ಬಗೆದಗೆ ಮೋಹಂ
ಮುಸುಕದು, ಮಿಸುಕದು ಕಾತರತೆ;
ಬದುಕಿನ ನನ್ನಿಯ
ಬದುಕುವ ನಿನ್ನಯ
ಕವಿತೆಯೊಳವಿತಿರದಾತುರತೆ.

ಮಿನುಗುವ ದನಿಯೆನೆ,
ದನಿಸುವ ಮಿನುಗೆನೆ,
ಚಂದವೆಲ್ಲವೊಂದೆನೆ ನಿನ್ನೀ
ಬಣ್ಣದ ಗಾನದ
ತಣ್ಣನೆ ತಾನದ
ಉಗುಮಿಗುತಿದೆ ಬದುಕಿನ ನಿನ್ನಿ.

**ನಾ**ಂದದೆ ಎಂತು
ಮಿಂದಪೆಯಂತು
ನಿಜ ಬಾಳ್ವಿಯ ಬಾಳ್ವಿಯಲೇಶಂ;
ನಂದಲಿ ಇಂದೂ
ಮುಂದೆಯೊ ಎಂದೂ
ಸುರಿವೆ ಮೆರೆವೆ ಮಧುರಾವೇಶಂ.

ಕಾವ್ಯಸಾಮ್ರಾಜ್ಯ

ಇಂಗದ ಕನಸೆನೆ,
ತಂಗುವ ನೆನಸೆನೆ;
ಮಿರುಮೊಳಗೆನ್ನೆದುರಲಿ ಸವಿಯೆ!
ಸೊಗಸೆನೆ ಬಾರ!
ಸೊಗಮಿರು! ತಾರ
ಸ್ವರ ಕವಿಯೆ! ಭಾಸ್ವರ ಕವಿಯೆ!

—ಗೋವಿಂದ ಪೈ.

---

# ಮೂಹೂ!

ಮಲ್ಲಿಕಾ ಬಕುಲ ಚಂಪಕಾ
ಸಾಕು ನನಗೆ ಈ ಸುಕಾ
ಇಲ್ಲಿನಾ ಸಕಲ ಶಾಂತಿಯಾ
ಉಂಡೆ ಕೈವಲ್ಯ ಕಾಂತಿಯಾ
ಎಲ್ಲ ಈ ಜಗವನಳಿಯಿಸಿ
ಹೂವ ಸೌರಭ್ಯವುಳಿಯಿಸಿ
**ದೇ**ವತಾ ಮರೆಯೆ ಆದರೂ
ಅವನ ಕಾರುಣ್ಯ ಹೋದರೂ
**ಮ**ಲ್ಲಿಕಾಲತೆಯ ಮನೆಯಲಿ
ಮೊಗ್ಗೆ ಹೂವುಗಳ ನೆರಳಲಿ
**ಚಂ**ಪಕಾವಳಿಯ ಹಸೆಯೊಳು
ಬಕುಲ ಮಾನಿನಿಯ ಕೆಲದೊಳು
**ಸಿ**ಕ್ಕುವಾ ನಲಿವನುಣ್ಣುವೆ
ಸಿಡಿಲನೂ ಸವಿಯ ಮಾಡುವೆ
**ಅ**ಲ್ಲವೊ ಬರಿಯ ವಾಸನೆ
ಸೊಬಗಿನಾ ಕಣ್ಣ ಪಾರಣೆ
**ಜೀ**ವಹೂವೆನುವ ಗೆಳೆಯರು
ಸಾವು ಮೈಯಳಿದ ಎಳೆಯರು
**ಗಾ**ಳಿ ಮಂಚದಲಿ ಬೆರೆಯುತ
ತಾವುನಾವೆಂದು ಮರೆಯುತ
**ಹಿ**ಗ್ಗಿನಾ ತುದಿಯನೇರುತ
ಸೇವ್ಯನಾಪದವ ಸೇರುತ
**ಸ**ಖ್ಯದಾ ಕಂಪು ತರುತಿಹಾ
ನಿತ್ಯ ಯಾತ್ರಿಕರ ಗಮಗಮಾ!

— ರಂಗನಾಥ ಮುಗಳಿ.

---

# ಕೋಗಿಲೆ

ಆವ ಕಬ್ಬಿಗನಿವನು?
ಮಾಮರದ ಕೆಂದಳಿರ
ತೂಗುಮುಯ್ಯಲೆಯೊಳೊರಗಿ
        ಜೀವಿಗಳ ಬಗೆವನೆಯ
        ನೋವಿನುರಿಯನು ತವಿಸಿ,
        ನೋಡದಕೊ! ಹಾಡುತಿಹನು?

ಇವನ ಕಬ್ಬದವ್ಯೈಮೆ
ಯೆನಿತೊ! ಜಡತರ ವಿಶ್ವ
ವನೆ ತೀವಿ ತುಳುಕುತಿಹುದು!
        ಹೊನಲು, ಕಲಕಲರವವ
        ನುಳಿದದಕೆ ಮರುಳಾಗಿ
        ಕಿವಿಗೊಟ್ಟು ಕೇಳುತಿಹುದು!

ಒಂದೆಭಾವಕೆ ಹಲವು
ಬಣ್ಣಗಳ ಮಿರುಗಿಟ್ಟು
ಹಾಡುತಿಹರೆನಿತೊ ಮಂದಿ.
        ಒಂದೆಹಾಡಿನೊಳತುಲ
        ಭಾವಗಳು ತುಂಬಿರಲು
        ಹಾಡುತಿಹರೆನಿತು ಮಂದಿ?

ಹಾಡಲೆಂದುಸಿರೆತ್ತಿ,
ಭಾವಗಳನೆಳೆದೆಳೆದು
ಕೂಡಿಸುವ ಕವಿಗಳೆಲ್ಲಿ!
        ಮೂಡಿಕುವ ಭಾವಗಳೆ
        ಹಾಡಾಗಿ ಹರಿಯುತಿರ
        ಲಿವನ ಬಿನ್ನಾಣವೆಲ್ಲಿ!

# ಕಾವ್ಯಸಾಮ್ರಾಜ್ಯ

ನೇಸರನು ಮೂಡುತಿರ
ಲಿವನೆದೆಯಮಲರರಳಿ,
ತನಿಸೊದೆಯ ಸೂಸುತಿಹುದೆ?
ಬಾಸೆವೆಣ್ಣಿನ ಕೈಯ
ಬೀಣೆಯದು ಕೆಳಗುರುಳು
ತಿವನೆದೆಯನೊಂದಿರುವುದೆ?

ಆವ ಕಬ್ಬಿಗನಿವನು?
ನರುಗಂಪಿನೈಸಿರಿಯಿ
ನೆಸೆವ ವನಕುಸುಮದಂತೆ;
ಜಸದಮಾಳ್ಕೆಯನೆಣಿಸ
ದೆಳದಳಿರ ಹಿಂದುಳಿದು
ನೋಡದಕೊ! ಹಾಡುತಿಹನು?

— ಯಸ್. ವೆಂಕಟರಾಜ.

---

# ತಾಯಿ

**ಕ**ರುಣೆಯೆಂಬುದನರಿಯೆ; ಬಲ್ಲೆ ನಿಯಮವನೊಂದ;
ಆಳುವದು ಎಂದಿನೊಲು ಇಳೆಯನಿಂದು.
ಅವರಾಳ್ಕೆಗೊಳಪಟ್ಟು ಸಾಗಿರುವ ವಿಶ್ವದಲಿ
ಬವಣೆ ಬಟ್ಟರೆ ಬಾರದಿರವೆ ಕುಂದು?

**ಮು**ಳ್ಳುಗಂಟೆಯು ಒಂದು; ಹೂವಿಹವು ನೂರೊಂದು;
ಇವರಂತೆ ನಡೆದಿಹುದು ಸೃಷ್ಟಿಕ್ರಮವು.
ಶುದ್ಧ ಕಲ್ಪನೆಯೊಂದು; ಚಿತ್ರಗಳು ನೂರೊಂದು;
ಇದನಲ್ಲಗಳೆಯುವದು ಬರಿಯ ಭ್ರಮವು.

**ಸ**ತಿಯಾದ ಮಾನಿಸಳು ಮಾತೆಯಾಗದೆ ನಿಲಲು
ಬಾಳುವೆಗೆ ಮುಕುಟವನು ತೊಡಿಸವಂತೆ;
ಜೀವವನೆ ಧಾರೆಯೆರೆದಿರುವಂಥ ಸರಸತಿಗೆ
ತನ್ನ ಮನದಲರುಗಳ ಮುಡಿಸವಂತೆ.

**ಯಾ**ವ ಧ್ಯೇಯವೆ ಇರಲಿ–ಅದಕೊಂದು ರೂಪವಿದೆ,
ರೂಪವನು ತಳೆಯದಲೆ ಬಾಳ್ವೆಯಿಲ್ಲ.
ಮಣ್ಣಿನಲಿ ತಲೆಯೆತ್ತಿ ವ್ಯೋಮಗಣ್ಣಿನಾಸರವ–
ನರಸುತ್ತ ಮಾನವರು ನಡೆವರಲ್ಲ!

**ಪ್ರೇ**ಮವೆನಗಾರಾಧ್ಯವಿರಲದಕೆ ನೈವೇದ್ಯ–
ವಲ್ಲವೇ ನನ್ನಣುಗರೆಳೆಯ ನಗೆಯು?
ಅವರ ಮೃದು ಮಧುರ ಧ್ವನಿಯಲ್ಲವೇ ಘನಮಂತ್ರ?
ಇದನುಳಿದುಪಾಸನೆಯು ಯಾವ ಬಗೆಯು?

**ಆ**ತ್ಮನೊಳಗಂಕುರಿಸಿ ಧ್ಯೇಯ ಮನದಲಿ ಕೊನರ್ತು–
ಕಾಯದಲಿ ಕಾಯಾಗಿ ಒಪ್ಪಲೇನು?
ಋಷಿಯ ದಿವ್ಯ ದೃಷ್ಟಿ, ಕವಿಯ ಕಾವ್ಯಸುವೃಷ್ಟಿ,
ಪ್ರೀತಿಸುವವಳ ಸೃಷ್ಟಿ–ಇಂತೆ ತಾನು

**ಸು**ಖಕೆ ಮೇಲ್ಬೀಳುವರು ನನ್ನ ಗೆಳತಿಯರೆಲ್ಲ;
ಸುಖದುಃಖಗಳ ಭೇದವರಿದು ನನಗೆ.
ಒಂದು ಮಗು ಸುಖವೇನು? ಎರಡು ಮಗುಗಳು ಸುಖವೊ?
ಏನು ಮಗುವಿರದಿಹುದೆ ಸುಖವೊ ತನಗೆ?

**ಯಾ**ರು ಇಹುದನು ತೊರೆದು ಯಾವ ಬೆಳಕನು ಕಂಡು
ಧನ್ಯತೆಯ ಹೊಂದಿದರೊ ನಾನು ತಿಳಿಯೆ!
ವಿಶ್ವಚಕ್ರವು ಕೇಳ್ದ ತೆರಿಗೆಯನು ಪೂರೈಸಿ
ಮನೆಗೆ ನಡೆವರಿವೊಂದು ನನ್ನ ಬಳಿಯೆ.

**ಬು**ದ್ಧಿವೈಭವಕೆಂದು ತಾಯ್ತನವ ಮೆಟ್ಟುವರು;
ಬುದ್ಧಿಯೊಳಗಾವಮೃತಕಲಶವಿದೆಯೊ?
ವಿದ್ಯೆಯಲ್ಲೇನಿಹುದು? ಯಾವುದರಲೇನಿಹುದು?
ಇಲ್ಲಿ ತೃಪ್ತಿಯ ಕಾಂಬುದಾವ ಎದೆಯೊ?

**ಬಾ**ಳ್ವಿಕೆಯ ಒಗಟಕ್ಕೆ ಬಾಳುವೆಯೆ ಉತ್ತರವು.
'ಎಂತಿರಲಿ?' 'ನಿನ್ನರವು ಎಂತೊ ಅಂತೆ.'
ಇದ್ದುದಕೆ ಇಲ್ಲದರ ಕುಂದಣವ ಬಳಸದಿರು,–
ವಿದ್ಯೆ, ಸಂಪದ, ಬುದ್ಧಿ, ಎಲ್ಲ ಕಂತೆ!

**ಜೀ**ವನವು ಕಲಮನಂಟಿಸದೆ ನಿಲ್ಲುವ ಮರವು.
ಬೇವಿರಲಿ, ಮಾವಿರಲಿ–ಅಷ್ಟೆ ತಾನೆ!
ಸುಖದುಃಖಗಳ ಗಾಳಿ ಸೋಂಕಿದರೆ ಸೋಂಕುವದು
ಮರವು ಧೇನಿಸುತಿಹುದು ತನಗೆ ತಾನೆ!

**ಜೀ**ವನವನಾವ ಚಿನ್ನದ ಕವಚದಲಿ ಹೊಗಿಸಿ
ವಿದ್ಯೆಬುದ್ಧಿಗಳೊಡನೆ ಶೃಂಗರಿಸುತ
ಜೀವಕಳೆ ಕೊಡಬಹುದು? ಕಂಡಾ ಕಳೇವರವ
ಸುರರು ತೆರಳುವರು ಕಂಬನಿ ಸುರಿಸುತ.

ಅದಕಂತೆ ತಿಳಿದಿಹೆನು ಬಾಳುವೆಯ ಪಥದಲ್ಲಿ
ಒಮ್ಮನದಿ ಮುಂಬರಿದು ನಡೆವುದೆಂದು.
ದಾರಿಯಲಿ ಹಿಗ್ಗಲಿಹ ಸ್ವಾನುಭೂತಿಯಲೆಲ್ಲ
ಜ್ಞಾನಸಂಪಾದನೆಯ ಪಡೆವುದೆಂದು.

ಕ್ರಿಸ್ತನ ಪುರಾಣದರ್ಥವ ಮಥಿಸುವದಕಿಂತ
ಕ್ರಿಸ್ತಮಾತೆಯ ಮೋದವಲ್ಲೆ ಮೇಲು?
ಕೃಷ್ಣನನು ಸಲುಹಿದ ಯಶೋಧರೆಯ ಬಾಳುವೆಗೆ
ಯಾವ ಹವ್ಯಾಸವಿದೆ, ಯಾವ ಸೋಲು?

ಶಿಶುವಾಗಿ ನೋಟವನು ಸತಿಯಾಗಿ ಬೇಟವನು
ತಾಯ್ತನದಿ ಆಟವನು ಕಂಡು ಮುಂದೆ
ಎಲ್ಲ ನಿನ್ನಯ ಮಾಟವೆಂದರಿತು ಪದತಲದಿ
ನನ್ನ ಮುಡಿಯಿಟ್ಟಲ್ಲಿ ಮುಕ್ತಿ, ತಂದೆ!

— ವಿನಾಯಕ.

---

# ನೀನು ನನ್ನ ಭಾವನೆಯಲಿ

ಪ್ರೇಮ ಜಲತರಂಗದಲ್ಲಿ;
ಅದರೊಳವಿತ ಭಾವನೆಯಲಿ.
ಭಾವಿಸಿಪ್ಪ ಎದೆಯ ತಳದಿ,
ರಾಜ್ಯ ಕಟ್ಟಿ ನೆಲೆಸಿಹೆ!
ಅಲ್ಲಿ ನಿನ್ನ ಅಮರಗಾನ;
ಇಂದು ಕಾಂಬೆನದರತಾಣ.

ಎಂತೊ, ಏನೊ ಯಾತಕೆಂದು,
ತಿಳಿಯದೇ ಮುಂದರಿಯಲಂದು;
ದಾರಿ ಕಂಡು ಕಾಣದಾಗಿ,
ಕುಗ್ಗಿ ಬಗ್ಗಿ ವ್ಯಥೆಯನಾಂತೆ.
ಆಗ ಕಂಡಿತೊಂದು **ಥಳಕು.**
ನಿನ್ನ ರಾಜ್ಯದೆಡೆಯ **ಬೆಳಕು.**

ಮನದೊಳಾಸೆ ಮೂಡಲಾಗಿ,
ಬೆಳಕು ಕಂಡ ಕಡೆಯ ಸಾಗಿ;
ದಿಟ್ಟಿಯಿಟ್ಟು—ನೋಡುವಲ್ಲಿ,
ಕಾಣದಾಯ್ತು ಕತ್ತಲಲ್ಲ.
ಎದೆಯೊಳಾಸೆ ಮೂಡಿತು.
ನೋಡಲೊಡನೆ ಬಾಡಿತು!

ಇಂತು ಬಹುಳ ದಿನವ ಕಳೆಯೆ;
ಜೀವಿತವ, ನಿರಾಶೆ ತನ್ನ-
ಚಿಂತೆಗೋಲಿನಿಂದಲಳೆಯೆ.
ಇಂದು ಕಂಡೆ ನಿಜವ ನಿನ್ನ.
ಇನ್ನು ನಿನ್ನ ಮಾಟದಾಟ—
ವೆನ್ನ ಬಗೆಯು ಬೆಳಸದಿರಲಿ.

ಎನ್ನೆದೆಯೊಳು ನಿನ್ನ ಕಂಡೆ-
ನೀಗ ನಿನ್ನೊಳಾನೆ ಬೆರೆತೆ;
**ನೀನು ನನ್ನ ಭಾವನೆಯಲಿ!**
ನಾನು ಜಲತರಂಗದಲ್ಲಿ!!
ಮನದ ರಾಜ್ಯದಲ್ಲಿ ಸುಖಿಪ
**ಧನ್ಯ ನಾನು ನಿನ್ನ ವೇಣು.**

---ದುರ್ಗಾದಾಸ.

---

# ಮಾಂಬಿ

ಮಾಂಬಿ ನಮ್ಮ ನಾಯ ಹೆಸರು.
  ಕಣ್ಣು ಬಿಟ್ಟು ಹತ್ತು ದಿನಸ
ತುಂಬುವುದಕೆ ಮೊದಲೆ ಅದನು
  ಕೊಂಗರವನು ಕರಿಯನೊಬ್ಬ
ನಾಯಿ ಮರಿ ಬೇಕೆ ಎಂದು
  ನಮ್ಮ ಬೀದಿಯಲ್ಲಿ ತಂದ.
ತಾಯಮೊಲೆಯ ಬಿಡಿಸಿ ಇಷ್ಟು
  ಚಿಕ್ಕಮರಿಯ ತರುವರೇನೊ
ಎಂದು ಅವನ ಬಯ್ದು ಅಮ್ಮ
ನಾಲ್ಕು ಹಣಕೆ ಕೊಂಡಳದನು.
    ಅಂದು ಮಾಂಬಿ ನಮ್ಮಗಾಯ್ತು;
    ನಮ್ಮ ಮಾಂಬಿ ಮುದ್ದು ಮಾಂಬಿ.

ಮಾಂಬಿ ಹೆಸರು ಮಾಂಬಿ ಅಲ್ಲ;
  ರೂಬಿ. ನಮ್ಮ ಚಿಕ್ಕ ಅಣ್ಣ
ಸಾಂಬಮೂರ್ತಿ ಅದನು ಅಂದೆ
  ರೂಬಿ ಎಂದು ಕರೆದ; ತಾತ
ನಾಯಿಗೇಕೊ ನಾಮಕರಣ
  ಎಂದು ಕೋಪಿಸಿದರು. ಶುಂಡಿ,
ಬಾಯಿ ತಿರುಗದಿರುವ ಕೂಸು,
  —ನಮ್ಮ ಹಾಗೆ ಮಾತು ಬರದು—
ತೊದಲಿ ಮಾಂಬಿ ಎಂದಳವನು.
ಅವಳಿಗಾಗಿ ನಾವು ಕೂಡ
    ಮೊದಲು ಆಟಕಂತೆ ಕರೆಯೆ
    ಮಾಂಬಿ ನಿಂತು ರೂಬಿ ಹೋಯ್ತು.

ಬಂದ ದಿವಸ ನಮ್ಮ ಮಾಂಬಿ,
ತಾಯ ನೆನೆಮುಕೊಂಡೊ ಏನೊ,
ಕಂದನಲ್ಲೆ, ಮಂಕನಂತೆ
ಸುಮ್ಮನಿತ್ತು. ಬಾಗಿಲಲ್ಲಿ
ಇಳಿಸಿದೊಡನೆ ಬಹಳ ದಿವಸ
ಮನೆಯ ಕಂಡ ನಾಯಿಯಂತೆ
ಚಳಿಗೆ ಅಡಕವಾದ ಒಂದು
ಮೂಲೆಯಲ್ಲಿ ಮಲಗಿತು. ಇದು
ಏಕೊ ಎಂದು ನಾವು ಹೋಗಿ
ಎಬ್ಬಿಸೋಣ ಎನಲು, ಅಮ್ಮ,
ಸಾಕು ಬಿಡಿರಿ ಹೊಸದು, ಪಾಪ,
ಇರಲಿ, ಎಂದು ಗದರಿಸಿದಳು.

ನಮ್ಮ ಮುದ್ದು ಮಾಂಬಿ ಅಂದು
ಒಂದು ದಿವಸ ಮಾತ್ರ ತನ್ನ
ಅಮ್ಮನನ್ನು ನೆನೆದು ಮರುಗಿ
ಬಳಿಕ ಅವಳ ಮರೆತೆಹೋಯ್ತು
ಮಾರನೆ ದಿನ ನಾವು ಎಲ್ಲ
ಏಳುವುದಕೆ ಮುನ್ನ ಎದ್ದು
ತಾರಮಾರ ಮನೆಯಲೆಲ್ಲ
ಅಲೆಯುತಿತ್ತು. ನಾನು ಎದ್ದು
ಹಾಸಿಗೆಯಲಿ ಕುಳಿತುಕೊಳಲು,
ಬಳಿಗೆ ಬಂದು ಬಾಲವನ್ನು
ಕಾಸಿನಷ್ಟು ಆಡಿಸುತ್ತ
ನ್ಯಾಸ್ತಬೇಡಿ ನಿಂತಿತಲ್ಲಿ.

ಎಂತ ಮುದ್ದು ನಾಯಿ ಮಾಂಬಿ!
ಅದರ ಮೂಗು, ಅದರ ಬಾಯಿ,

ದಂತದಂತ ಅದರ ಹಲ್ಲು,
  ಕೆಂಪು ಹೊಳಪ ಅದರ ಕಣ್ಣು,
ಜೋಲು ಕಿವಿ; ಎಷ್ಟು ಚೆನ್ನ!
  ಚೆಲುವ ನಾಯಿ ನಮ್ಮ ಮೊಂಬಿ.
ಬಾಲ ಬಿಲ್ಲಿನಂತೆ ಬಾಗಿ
  ಎಲ್ಲಕಿಂತ ಬಹಳ ಚೆನ್ನ;
ಹುಬ್ಬುನೋಡೆ ಸಿಂಹದಂತೆ
ಭೀತಿಯಾಗುವಂತೆ ಇಹುದು;
    ಅಬ್ಬರಿಸುವ ಕೂಗು ಬೇರೆ;
    ಎಳೆಯ ಸಿಂಹ ನಮ್ಮ ಮೊಂಬಿ.

ಹಾಲಿಗೊಂದು ತಟ್ಟೆ ಅದಕೆ;
  ಕೊರಳಿಗೊಂದು ತೊಗಲಪಟ್ಟೆ;
ಮಾಲೆಯಂತೆ ಎರಡು ಅಡಿಯ
  ತೆಳುವ ಕೊಂಡಿ ಸರಪಳಿ;
ಮಲಗುವುದಕೆ ಗೋಣಿ ಪಟ್ಟೆ;
  ಇರಲು ಬೀದಿ ಬಾಗಿಲ ಬಳಿ
ಚಳಿಗೆ ಬೆಚ್ಚಗಿರುವ ಮೂಲೆ;
  ಎಲ್ಲ ನೆಟ್ಟಗಾಯಿತಿಂತು.
ಒಳ್ಳೆ ಸುಟಿಯ ನಾಯಿ, ಮೊಂಬಿ;
ಇದನು ನೋಡಿ ಇನ್ನು ತಾನು
    ಇಲ್ಲೆ ಇಹುದ ತಿಳಿದು ಮನೆಯ
    ಹೊಂದಿಕೊಂಡಿತೆನ್ನದೆಂದು.

ಯಾರು ಬರಲಿ, ಬಾಗಿಲ ಬಳಿ
  ಗೊರ್ ಎಂದು ಹೆದರಿಸುವುದು;
ದಾರಿಯಲ್ಲಿ ಜನರು ನಡೆಯೆ
  ಅವರ ನೋಡಿ ಬಗುಳುವುದು;

ತಾನು ಏನೊ ಹಿರಿಯ ಕೆಲಸ
ಮಾಡಿದಂತೆ, ಜಂಭದಿಂದ
ಏನೊ ಒಂದು ಠೀವಿಯಿಂದ,
ನಮ್ಮ ಕಡೆಗೆ ನೋಡುವುದು;
ಒಮ್ಮೆ ನಾವು ಬರಲು ಬಗುಳಿ,
ನಾವು ಎಂದು ತಿಳಿದ ಮೇಲೆ
ಸುಮ್ಮನಾಗಿ ಮೂಲಗುತ್ತ
ಕ್ಷಮೆಯ ಬೇಡಿ ಎರಗುವುದು.

ಮೊಂಬಿ ಬಂದ ಮೇಲೆ ನಮ್ಮ
ಸುಂದರೀಗೆ ಆಡುವುದಕೆ
ಗೊಂಬೆ ಬೇಡವಾಯ್ತು; ಅವಳು
ಅದರ ಬಳಿಯೆ ಕುಳಿತು ಅದರ
ಕಾಲ ಹಿಡಿದು ಎಳೆದು, ಕಿವಿಗೆ
ಕೈಯನಿಕ್ಕಿ ಆಡಿಸುವಳು;
ಬಾಲ ನುಲಿಚೆ ಗೂರ್ ಎನಲು
ನೋಡಿ ಬಹಳ ನಗುವಳು;
ಪೇಟೆಯಿಂದ ತಂದ ಗೊಂಬೆ
ಹಿಂಗೆ ಇಹುದೆ? ಇನ್ನು ಇವಳ
ಕಾಟ ಇಲ್ಲ ಗೊಂಬೆಗೆಂದು
ಅಮ್ಮ ಅಂದು ಹೇಳಿದಳು.

ನಾವು ಅದಕೆ ಕೊಟ್ಟ ಬೆಲೆ
ಬಹಳ ಕಮ್ಮಿ ಎನ್ನಬೇಕು.
ಕಾವಲಾಯ್ತು ಮನೆಗೆ ನಮಗೆ
ಜೊತೆ, ನಮ್ಮ ಸುಂದರೀಗೆ
ಗೊಂಬೆ; ಎಲ್ಲ ನೋಡಿ ತಾತ
ನಾಯಿಮರಿಯ ಕೊಂಡುದೇನೊ

ತುಂಬ ಒಳ್ಳೆ ಕೆಲಸವಾಯ್ತು,
ಎಂದು ಒಮ್ಮೆ ಹೇಳಿದರು.
ಅಣ್ಣಾ ಅದಕೆ, ಮಾಂಬಿಗಿಂದು
ಪ್ಯಾಸು ಆಯ್ತು ಎಂದು ನಕ್ಕ
ಸಣ್ಣ ನಾಯಿ: ಆದರೇನು?
ಬುದ್ಧಿ ಇರಲು ಪ್ಯಾಸು ಇಲ್ಲೆ?

ಹೀಗೆ ಇರಲು, ಒಂದು ವರುಷ,
ಮಾಂಬಿಯೊಡನೆ ಆಟದಲ್ಲಿ
ಹೇಗೆ ಎಂದು ತಿಳಿಯದಂತೆ
ಒಂದು ವರುಷ ಕಳೆದು ಹೋಯ್ತು.
ಎಲ್ಲಿ ಎಲ್ಲು ನಮ್ಮ ಮಾಂಬಿ;
ಮನೆ ಬೀದಿ ಕೋಟೆ ಪೇಟೆ
ಹಳ್ಳಿ–ಎಲ್ಲ ಕಡೆಯು ನಮ್ಮ
ಜತೆಯೊಳಿಹುದು; ನಮ್ಮ ಸುತ್ತ
ಇವರ ಮನೆಯ ನಾಯಿ ಬಹಳ
ಒಳ್ಳೆ ನಾಯಿ ಎಂದೆನುವರು;
ಅವರು ಇವರು ಇಲ್ಲ, ಎಲ್ಲ
ಜನವ ಮಾಂಬಿ ಮೆಚ್ಚಿಸಿತ್ತು.

ಒಂದು ದಿವಸ ಪೇಟೆಯಲ್ಲಿ
ಅಣ್ಣನೊಡನೆ ಹೋಗಿ, ಒಂದು
ಸಂದಿಯಲ್ಲಿ ಬರುತ ಮಾಂಬಿ
ದಾರಿ ತಪ್ಪಿ ಎಲ್ಲೊ ಹೋಯ್ತು;
ಸುತ್ತಲೆಲ್ಲ ಹುಡುಕಿ ಅಣ್ಣ
ಸಿಕ್ಕದಿರಲು ಚಿಂತೆಯಿಂದ
ಎತ್ತ ಹೋಯ್ತು ಎಂದು ಮನೆಗೆ
ಒಂಟಿಯಾಗಿ ಬಂದರಂದು.

ಹೋದ ನೋವ ನುಂಗಿ ನಾವು,
ಮಾತನಾಡೆ ಅಣ್ಣನನ್ನು
ಬೈದ ಹಾಗೆ ಆಗೊದೆಂದು.
ಬಾಯತೆರೆಯದಿದ್ದ ವೆಲ್ಲ.

ಮೂರು ದಿವಸ ಹೀಗೆ ಇರಲು
ಮಾಂಬಿ, ಗ್ರಹಣ ಹಿಡಿದು ಬಿಟ್ಟ
ಸೂರ್ಯನಂತೆ, ನಾಲ್ಕನೆ ದಿನ
ಉದಯದಲ್ಲಿ ಮನೆಗೆ ಬಂತು.
ಬೀದಿಯಲ್ಲಿ ನಾಲ್ಕು ಕಾಲ
ಓಟದಲ್ಲಿ ಹಾರುತಿಹುದು;
ಏಡುತಿಹುದು ಓಡಿ ಓಡಿ;
ಏನು ಅದರ ಸಂತಸವೊ!
ಏನು ಹೆಮ್ಮೆ ಏನು ಕುಣಿತ!
ಏನು ಓಟ ತಾರಾಟ!
ಮಾನ ಇಷ್ಟು ಇಲ್ಲದಂತೆ
ಆಡಿತು ಅತಿ ಸಂತಸದಲಿ.

ನಮಗು ಬಹಳ ತುಷ್ಟಿಯಾಯ್ತು;
ಅದನು ಮೆಚ್ಚಿ ಮುದ್ದಿಸಿದೆವು;
ಭ್ರಮೆಗೆ ಅಮ್ಮ ಮೂರು ದಿನದ
ಹಾಲಿ ಒಮ್ಮೆ ಕೊಟ್ಟಳದಕೆ.
ತಾತ, ಮಾಂಬಿ ಒಳ್ಳೆ ನಾಯಿ,
ಮನೆಯರಿಯಿತು, ಇನ್ನು ಮೇಲೆ
ಭೀತಿಯಿಲ್ಲ ದಾರಿತಪ್ಪಿ
ಎತ್ತ ಹೋಯ್ತೊ ಏನೊ ಎಂದು,
ಎಂದು ಅದನು ಹೊಗಳಿದರು.
ಮೂರು ದಿವಸ ಅಳುತಲಿದ್ದ

ಸುಂದರೀಗೆ ಆಟಕದರ
ಬಾಲ ಮತ್ತೆ ಸಿಕ್ಕಿತಂದು.

ನನಗೆ ಒಂದು ನೋವು ಈಗ.
ನಮ್ಮ ಆಳು ನರಸ, ಅವನ
ಮನೆಯಲೆರಡು ಪಾರಿವಾಳ
ಸಾಕುತಿದ್ದ. ಒಂದು ದಿವಸ
ಮಾಂಬಿ ಅವನ ಜತೆಗೆ ಹೋಗಿ
ಅಂಗಳದಲಿ ಕುಳಿತು ಇದ್ದು,
ನಂಬಿಕೆಯಲಿ ಪಾರಿವಾಳ
ಬಳಿಗೆ ಬರಲು, ಅದನು ಹಿಡಿದು
ಕೊಂದಿತಂತೆ. ನರಸ ಅದನು
ಬಿಡಿಸಲೆಷ್ಟೊ ಮಾಡಿದನು.
ಒಂದೆ ಪಟ್ಟು ಹಿಡಿದು ಅದನು
ತಿಂದೆ ಬಿಟ್ಟಿತಂತೆ ಮಾಂಬಿ.

ಮಾಂಬಿಗಂದು ಅಣ್ಣನಿಂದ
ಬಹಳ ಏಟು. ಅವರು ಅದನು
ಕಂಬಕದರ ಸರಪಳಿಯಲಿ
ಕಟ್ಟಿ, ಅದರ ಮುಖದ ಮೇಲೆ,
ಕಾಲಮೇಲೆ, ಬೆನ್ನಮೇಲೆ,
ಇಲ್ಲಿ ಅಲ್ಲಿ ನೋಡದಂತೆ,
ಸೀಳುವಂತೆ ಹೊಡೆದರದನು.
ಇಲ್ಲ, ಇನ್ನು ಇಲ್ಲ, ಎಂದು
ಹೇಳುವಂತೆ, ಮಾಂಬಿ ಬಹಳ
ಕೂಗಿ ಕೂಗಿ ಅತ್ತಿತಂದು.
ಹಾಳು ಹಕ್ಕಿ ಬಳಿಗೆ ಬರಲು
ಮಾಂಬಿಗಿಷ್ಟು ಗಾಸಿಯಾಯ್ತು!

ಮರಳಿ ಮಾಂಬಿಯನ್ನು ಯಾರೊ
ಕದ್ದುಕೊಂಡು ಹೋದರೊಮ್ಮೆ.
ಅಂತ ನಾಯಿ ಸಮಯನೋಡಿ
ಮನೆಗೆ ತಾನೆ ಬರುವುದೆಂದು
ನಮ್ಮ ತಾತ ಹೇಳಿದರು.
ಮಾರನೆದಿನ ಬಂದೆ ಬಂತು.
ಚಿಮ್ಮಿಹಾರಿ ಕುಣಿದು ತನ್ನ
ಸಂತಸವನು ಸೂಚಿಸಿತು.
ಓಡಿ ಹೋಗಿ ಮರಳಿ ಬಹುದು
ಆಟವಾಯ್ತು, ನಿನಗೆ ಏನು
ಧಾಡಿ ಬಂತು, ಎಂದು ಅದನು
ಮತ್ತೆ ನಾವು ಮುದ್ದಿಸಿದೆವು.

ಎರಡನೆ ಸಲ ಹೀಗೆ ಹೋಗಿ
ಬಂದು ಮಾಂಬಿ, ಏಕೊ ಏನೊ,
ಚುರುಕು ತಪ್ಪಿ ಮಂಕನಾಯ್ತು;
ಅದರ ಹೊಟ್ಟೆ ಉಬ್ಬರಿಸಿತು;
ಏನು ಇಲ್ಲ ಎಂದೆ ಇರಲು
ಕುಡಿವ ಹಾಲು ಕಡಿಮೆಯಾಯ್ತು;
ಮೌನವಾಗಿ ಮೂಲೆಯಲ್ಲಿ
ಮಲಗಿ ಇಹುದು ಬಹಳವಾಯ್ತು;
ದನದ ವೈದ್ಯರನ್ನು ಕೇಳೆ,
ಅದಕೆ ಏನೊ ಒಂದು ರೋಗ,
ಗುಣಕೆ ದಾರಿಯಿಲ್ಲ, ನಾಯಿ
ಉಳಿವುದಿಲ್ಲ, ಎಂದರವರು.

ಮೂಗು ಜೀವ! ಹೇಳಬರದು;
ಆದರೇನು ನೋವು ಉಂಟು;

ರೋಗ ಹಾಗೆ ಹೆಚ್ಚು ಆಯ್ತು;
ದಿನಕೆ ದಿನಕೆ ಹಾಲೆ ಬೇಡ.
ತಾತ, ಅದರ ಪಾಡು ನೋಡಿ,
ಅಯ್ಯೋ ಪಾಪ ಎಂದು ಬಹಳ
ಪ್ರೀತಿಯಿಂದ ಬಳಿಗೆ ಹೋಗಿ,
ಸ್ವಲ್ಪ ಕುಡಿ, ಎನ್ನುವರು.
ಎನಲು ಮೊದಲು ಸ್ವಲ್ಪ ನೆಕ್ಕಿ,
ಬಾಯ್ಗೆ ಬೇಡ, ಸುಮ್ಮನಿಹುದು.
ತನಗೆ ಕೃಪೆಯ ತೋರಿದುವಕೆ
ವಂದಿಸುತ್ತ ಮಲಗುವುದು.

ದಿನಕೆ ದಿನಕೆ ಹೀಗೆ ಮಾಂಬಿ
ಮರುಗಿ ಕೊರಗಿ ಕುಸಿದು ಹೋಯ್ತು;
ಕೊನೆಯ ದಿವಸ ಮನೆಯ ಹೊರಗೆ
ಕಲ್ಲು ಮಂಚದಡಿಗೆ ಹೋಗಿ,
ಮುನ್ನ ಕಾಲ ಚಾಚಿ, ತಲೆಯು
ನೆಲದೊಳಿಟ್ಟು ಮಲಗಿತಲ್ಲಿ.
ಚಿನ್ನ, ಮಾಂಬಿ, ಹೇಗಿರುವೆ,
ಎಂದು ನಾವು ಹೋಗಿ ನುಡಿಸೆ,
ಕಷ್ಟವೆಂದು ಹೇಳುವಂತೆ
ಮಲಗುವುದು ಮರುಗುವುದು.
ಅಷ್ಟು ದಿನದ ಆಟದ ಸುಖ
ನೋವಲೆಮಗೆ ಮರೆಯಿತಂದು.

ಅಂದು ಸಂಜೆ ಹೋಯ್ತು ಮಾಂಬಿ.
ನಾನು ನೋಡಲಾರದತ್ತೆ;
ಸುಂದರೀಗೆ ಇನ್ನು ಜೀವ
ಗೊಂಬೆಯಿಲ್ಲ ಎನುತ ತಾತ

ಮೋರೆಯನ್ನು ಒಂದು ಕಡೆಗೆ
ತಿರುಗಿಸಿದರು; ಕಣ್ಣಿನಲ್ಲಿ
ನೀರು; ಅಣ್ಣ ಅಮ್ಮ ಎಲ್ಲ
ಕಣ್ಣುನೀರು ಹಾಕಿದರು;
ಕೊನೆಗೆ ನರಸ ಶವವನೆತ್ತಿ
ಹೂಳುವುದಕೆ ಕೊಂಡುಹೋದ;
ನನಗೆ ಮನಸು ಮನೆಗೆ ಮನೆಯೆ
ಬೇರೆಯದಾದ ರೀತಿ ಇತ್ತು.

ಆಳದೊಂದು ಹಳ್ಳಮಾಡಿ
ನಾಲ್ಕು ಹಿಡಿ ಉಪ್ಪು ಹಾಕಿ
ಹೂಳಿ ಅದನು ನರಸ ಮತ್ತೆ
ಬರಿಯ ಕೈಲಿ ಮನೆಗೆ ಬಂದ.
ದಾರಿತಪ್ಪಿ ಊರಲೆಲ್ಲೊ
ಹೋಗಬಾರದಿತ್ತೆ ಮಾಂಬಿ!
ಮಾರನೆಯಲೊ ಮೂರರಲ್ಲೊ
ಮನೆಗೆ ಮರಳಿ ಬರುತಲಿತ್ತು!
ಬರದೆ ಇದ್ದರೂನೆ ಸಮನೆ;
ಜೀವದಿಂದ ಇರಲು ಸಾಕು.
ಮರಳಿ ಬರದ ತೆರದಿ, ಎಲ್ಲು
ಇರದ ತೆರದಿ, ಹೋಯ್ತು ಮಾಂಬಿ.

ಅಣ್ಣ ಅದನು ಒಂದು ದಿವಸ
ಬಹಳ ಹೊಡೆದ, ಎಂಬರೊಮ್ಮೆ;
ಇನ್ನು ಸ್ವಲ್ಪ ಅನ್ನಹಾಲು
ಕೊಡದೆ ಹೋದೆ ಎಂಬಳಮ್ಮ;

ಸಾಂಬಮೂರ್ತಿ, ಆದನು ಬಹಳ
ಓಡಿಸಿದೆನು, ಎನುತಲಿಹನು;
ಮೋಂಬಿಯನ್ನು ನಾನು ಕೂಡ
ಇನ್ನು ಸ್ವಲ್ಪ ಪ್ರೀತಿಯಿಂದ
ಕಾಣಲಾಗುತಿತ್ತು ಎಂದು
ಒಮ್ಮೆ ನಾನು ಯೋಚಿಸುವೆನು;
ಏನು ಮಾಡುವುದಕು ಈಗ
ಸಮಯವಲ್ಲ; ಮಿಂಚಿಹೋಯ್ತು.

ಮೋಂಬಿ ಹೋಗಿ ಇಂದಿಗೀಗ
ಹತ್ತು ದಿವಸವಾಗಿ ಹೋಯ್ತು;
ನಂಬುವುದಕೆ ಸಾಧ್ಯವಿಲ್ಲ
ಇಷ್ಟು ದಿವಸವಾಯಿತೆನಲು;
ಮೋಂಬಿ ಎಲ್ಲಿ ಅಕ್ಕ ಎಂದು
ನನ್ನ ತಂಗಿ ಇಂದು ಕೇಳೆ
ಸಾಂಬಮೂರ್ತಿ ಅಳುತ ನಿಂತ;
ಅಣ್ಣಾ ಆದಕೆ, ಯಾಕೆ ಅಳು,
ಬೇರೆ ನಾಯಿ ತರುವ, ಎನಲು
ಸಾಂಬಮೂರ್ತಿ ಕೋಪದಿಂದ,
ಯಾರಿಗಣ್ಣಾ, ನನಗೆ ಬೇಡ,
ಎಂದ. ನಾನು ಹಾಗೆ ಎಂದೆ.

ಮೋಂಬಿ ಹೋದ ಮೇಲೆ ಇನ್ನು
ಬೇರೆ ನಾಯಿ ಏಕೆ ನಮಗೆ?
ರಂಭೆಯಂತ ನಾಯಿ ಮೋಂಬಿ,
ಇನ್ನು ಅಂತ ನಾಯಿ ಉಂಟೆ?

ನಿನ್ನೆ ರಾತ್ರಿ ಕನಸಿನಲ್ಲಿ
ಮಾಂಬಿಯನ್ನು ಕಂಡು ನಾನು
ನನ್ನ ಮಾಂಬಿ ಸತ್ತೆ ನೀನು
ಎಂದೆವಲ್ಲ, ಸುಳ್ಳು ಅದು!
ಎನುತ ಅದನು ಹಿಡಿಯಹೋಗಿ
ಎದ್ದು ಕುಳಿತು ಕನಸನರಿತೆ.
ಕನಸೆ ಸರಿ, ಇನ್ನು ಮಾಂಬಿ,
ಬರಿಯದೊಂದು ಕನಸು ನೆನವು.

—ಶ್ರೀನಿವಾಸ.

---

# ಜೀವನ

ಬೆಟ್ಟದುದಿಯರೆಗಳನು ಹುಡಿಮಾಡಿ ಸೊರಗಿಸುವೆ
ಮಳೆಯಾಗಿ ಸುರಿದು ಸುರಿದು.
ಬೆಟ್ಟುಗಳ ಹೊಟ್ಟೆಯನೆ ಬಿರಿಯಿಸುವೆ ಕಸುವಿನಲಿ
ಝರಿಯಾಗಿ ಹರಿದು ಹರಿದು.

ಇಬ್ಬದಿಯ ದಂಡೆಯನು ಕರಗಿಸುವೆ ಸೆಳವಿಂದ
ಭೋರೆಂದು ಹಳ್ಳವಾಗಿ.
ದಿಬ್ಬವನು ಕೊಚ್ಚುತ್ತೆ ತಗ್ಗನ್ನು ಮುಚ್ಚುತ್ತೆ
ಸಾಗಿರುವೆ ಹೊಚ್ಚವಾಗಿ.

ಎಡೆಬಿಡದೆ ದುಡಿವೆಯೆಲ! ಹಗಲಿರುಳು ನಿನಗಿಲ್ಲೆ,
ದಣಿವಿಲ್ಲೆ, ಬೇಸರಿಲ್ಲೆ?
ಪೊಡವಿಯನು ತೊಳೆಯುತಿಹೆ, ಕಲ್ಲುಮಣ್ಣನು ಹೊರುವೆ,
ಅಭಿಮಾನವೆಂಬುದಿಲ್ಲೆ?

ಗಾಳಿಯಬ್ಬರದಿಂದ ಬಾನಿನಲಿ ಹೊಯ್ದಾಡಿ
ಬೀಳುತ್ತೆ, ಬಂಡೆಯನು ಹಾಯ್ದು, ಬಿಸಿಲಲಿ ಬಾಡಿ,
ಅಡಿದಪ್ಪಿ ಬಿದ್ದು ನೂರಾರಾಳು ಕೆಳಗಡೆಗೆ,
ನಡೆಗುಂದಿಯೊಡನೇಳಲಾರದೇಳುತೆ ಸಾಗೆ,
ಜನರಿಂದೆ ಬಂಧನಂಬಟ್ಟು ನೀನಹೆ ಭಂಗಿ,
ದಿನದಿನವು ಹೊಲದೊಳಲ್ಲಲ್ಲಿ ಹೋಗುವೆ ಇಂಗಿ.
ತೊಳಲುವುದಿದೇಕೆ ಹೇಳು.
ಜೀವನವೆ, ಅಳಿವುದಿದರಿಂದ ಮೇಲು.

ಇನಿತು ಸಾಹಸದಿಂದೆ ನೆಲವನ್ನು ಕೊರೆಮೊಯ್ದು
ಕಡಲನ್ನೆ ಹುಗಿವೆಯೇನು?
ನಿನಗಾರು ಬೆಸಸಿರುವರಿದನಿದರೊಳುದ್ದೇಶ-
ವೇನಿದಕೆ ಕೂಲಿಯೇನು?

ಬರುವುದಿಲ್ಲಿಗೆ ಬೇಡ, ಇಂತು ತೊಳಲಿಕೆ ಬೇಡ,
ನನಗೇನು ಬೇಡ ತೊಡಕೆ.
ಅರಿಯದೆಯೆ ಆಗುವುದು; ಕೂಲಿಯೋ? ಬಿಟ್ಟಿಯೋ?
ಬೆಸಸಿದವರುಂಟೆ ಇದಕೆ?

— ಮಲ್ಲಾರಿ.

# ಬಲಿದಾನ

ಮಾತೆ ಮನದಿ ಬಹಳ ದಿನದ ಆಸೆಯೊಂದು ಕುದಿವುದು,
ಪಡೆದು ಸಲಹಿದಾಕೆಗೇನು ಕಾಣ್ಕೆಯೀವೆನೆಂಬುದು;
ಬಯಕೆ ಮನದೊಳಾಯಿತು, ತತ್
ಕೃತಿಯು ವಿಫಲವಾಯಿತು
ನಿನ್ನನಲಿಸಲೇನು? ಮಾಡಲೆಂಬುದರಿಯದಾಯಿತು.

ನಿನ್ನೊಲುಮೆಯ ವಸ್ತುವೊಂದೆ ಇಹುದು ಜಗದಿ ಬಲ್ಲೆನು;
ಅದನಹಿಂಸೆಯಿಂದ ಪಡೆವ ಯತ್ನ ಬೇರೆ ಕಾಣೆನು;
ಹಿಂಸೆ ಸಹಿಸಲಾರೆನು, ಮೋ-
ಹಾಸೆ ತೊರೆಯಲಾರೆನು
ಪಾರತಂತ್ರ್ಯಪಾಶವಳಿವ ಯತ್ನಮಾಡುತಿರುವೆನು;

ಗೆಳೆಯನಾಗಿ ನೆರವನಿತ್ತು, ದಾಸನಾಗಿ ದುಡಿದೆನು;
ತಿರುಕನಾಗಿ ತಿರಿದುತಿರಿದು ಫಲವ ಕಾಣದಾದೆನು;
ಕಾಲುಶತಕಗಳೆಯಿತು—ತವ
ದುಗುಡ ಮೇರೆದಪ್ಪಿತು
ಸಹಿಸೆನೀಗ ದೇವಿ! ದುಃಖವೇರಿ ಹೃದಯಬೆಂದಿತು.

ಎನ್ನೊಲುಮೆಯ ಭಾರತಾಂಬೆ, ಕಡೆಯ ಯತ್ನಗೈವೆನೂ;
ನಿನ್ನ ಬಳಿಗೆ ಬರುವೆ ಕರುಣದೋರಿ ನೀಡು ಕರವನೂ;
ಅಳಿಲಸೇವೆ ಕಾಣ್ಕೆಯೆಂದು
ಚರಣಯುಗಲದಡಿಯೊಳೂ
ಭಕ್ತಿಯಿಂದ 'ಆತ್ಮಪುಷ್ಪ'ವನ್ನೆ ನೀಸಲಿಡುವೆನು.

—ರಘುಪತಿ ಶೇಣ್ಯ.

# ಪ್ರೇಮಭೈರವ

ಸುಡುವ ಬೆಂಕಿಗೆ ಕೈಯನೊಡ್ಡಿ
ಹುಡುಗ, ನಗುನಗುತಿರುವೆಯಲ್ಲ!
ಹಡೆದವರು, ಕಾಪಾಡುವವರು
ನಿನಗೆ ಯಾರೂ ಇಲ್ಲವೆ?

ಚೆನ್ನೆಯೊಬ್ಬಳ ಕಣ್ಣ ಹೊಳಪಿನ
ಬಣ್ಣಬಣ್ಣಕೆ ಬೆರಗುಗೊಂಡು
ಚಿಣ್ಣ, ನೀನು ಪತಂಗದಂತೆ
ಹಾರಿ ಸಲಿಯುತಲಿರುವೆಯೊ!

ಅವಳು ಒಲಿದಳು, ನೀನು ಒಲಿದೆ;
ಕವಲುಗೊಂಡಿತು ನಿಮ್ಮ ಸಲವು.
ಸವೆಯದಮೃತವು ದೊರೆಯಿತೆಂದು
ಇಷ್ಟರಿಂದಲೆ ಬಗೆದೆಯೊ!

ನಿಮ್ಮ ಇಬ್ಬರ ಪ್ರೇಮಲತೆಯನೆ
ನಿಮ್ಮ ಕೊರಳಿಗೆ ಬೀರಿ ಬಿಗಿದು,
ನೆಮ್ಮದಿಯನುಡುಗಿಸುವ ಮಾರನ
ತಂತ್ರವನು ನೀನರಿಯೆಯೊ!—

ವಿರಹವೆನ್ನುವ ಬೇಗೆಯೆಬ್ಬಿಸಿ
ಉರಿಗೊಳಿಸಿ ಸಂತಪಿಸಿ ತನುವನು,
ಅರೆಯುವನು ಸೌಖ್ಯವನು ಕಾಮನು;
ಅಡಗಿಸುವನುಲ್ಲಸವನು.

ಒಳಗೆ ಸಂಶಯವೆಂಬ ಬೀಜವ
ಬೆಳೆಯಬಿಟ್ಟು ಮುಗಿಲ ಮುಟ್ಟಿಸಿ,
ಹಿಳಿದುಬಿಡುವನು ಶಾಂತಿರಸವನು;
ಸಾವೆ ಲೇಸೆನ್ನಿಸುವನು.

ಕೆಡೆಗೆ ಸಖ ಮೃತ್ಯುವನು ಕಳುಹಿ
ಒಡೆದು ನಲ್ಲರ ಜೋಡಿಬಾಳನು,
ಕೆಡಹುವನು ತಳವಿಲ್ಲದಳಲಿನ
ಕೂಪದಲಿ ಉಳಿದವನನು.—

ಉರಿವ ಬೆಂಕಿಗೆ ಕೈಯನೊಡ್ಡಿ
ತರಳ, ತಿಳಿಯದೆ ನಗುವೆಯಲ್ಲ!
ಸರಸನೃತ್ಯವೆ ಪ್ರೇಮ?—ಭೀಷಣ
ಭೈರವನ ತಾಂಡವವದು!

—ತೀ. ನಂ. ಶ್ರೀಕಂಠಯ್ಯ.

---

# ದಾನ

ಕಮ್ಮಲರಿನ ಸಿರಿ ಬನದೆಲರೆದೆಯೊಳು
ತಂಪನು ಬೀರುವುದು
ಚಿಮ್ಮುತೆ ಚಿಗಿಯುತೆ ಹರಿಯುವ ಹೊನಲಿದು
ಪೆಂಪನು ಪಸರಿಪುದು;

ಮೂಡಣ ಬಾಸಿನ ಮುಗಿಲಿನ ಮೂಗುತಿ
ಬೆಳಕಿನ ಭಿಕ್ಷೆಯನು
ಬೇಡುವ ಬೇಡದರಿಗೆ ಕೊಡುತಿರುವುದು;
ಬಾಳನು ಬೆಳಗುವುದು.

ಬಣ್ಣದ ಚಿಟ್ಟೆಗಳೊಲಿಯುತೆ ಹಾರ್ವವು,
ಕಣ್ಣಿಗೆ ಹಬ್ಬವದು.
ತಿಣ್ಣನೆ ತೀಡುವ ತಂಬೆಲರೋಳಿಯು
ಹಣ್ಣನು ಮಾಗಿಪುದು

ಹಚ್ಚಗೆ ಹಸುರಿನ ಮೇಲೊರಗಿರುತಿಹ
ಮಂಜಿನ ಮಣಿಗಳಿವು
ನಚ್ಚಿನ ಮೆಚ್ಚಿನ ಗೆಳೆಯರ ತೆರದಲಿ
ರಂಜನೆ ಗೈಯುವುವು.

ಬುಟ್ಟಿಯ ಪಿಡಿದೈತರುವಾ ಪೆಣ್ಣಿನ
ನಲ್ಮೆಯದೆನಿತೆನಿತೊ!
ಸೃಷ್ಟಿಯ ದಾನದ ಕೈಗಳ ಗೈಮೆಯ
ಮೇಲ್ಮೆಯದೆನಿತೆನಿತೊ!!

—ಕೆ. ರಾಘವಾಚಾರ್ (ಮಿತ್ರಮಂಡಲಿ.)

---

# ಭರತಾರ್ಪಣ

ಈ ತನುಮನ
ಭರತಾರ್ಪಣ!
ಓ ಮನ್ಮನ
ಮನ್ಮಾತೆಯ
ಪುಣ್ಯಸ್ತನ
ವನ್ನೀಕ್ಷಣ
ಕುಡಿ; ತತ್ಕ್ಷಣ
ಸಲ್ಲಕ್ಷಣ
ನ ವಿಲಕ್ಷಣ
ಓ ಮನ್ಮನ
ಈ ತನುಮನ
ಭರತಾರ್ಪಣವು!

ಮಾನವ್ಯವು
ಇಹ ದಿವ್ಯವು
ನವ ನವ್ಯವು
ಅಹ ಭವ್ಯವು
ಬಹು ವಿಶ್ರುತ
ವೀ ಭಾರತ
ಇಲ್ಲಿಯೆ ರತ
ವಲ್ಲವೆ ಹಿತ
ತತ್ಪ್ರೇಷಿತ
ಮತ್ಸ್ನೇಹಿತ
ಓ ಮನ್ಮನ
ಪ್ರಿಯ ಮನ್ಮನ

ಈ ತನುಧನ
ಭರತಾರ್ಪಣವು!

ಅಲ್ಲಿಂದಲೊ
ಎಲ್ಲಿಂದಲೊ
ಇಂತೀ ಜನ
ಬಂತೀ ಕ್ಷಣ!
ನೆಲೆ ನಿಲ್ಲದ
ಸೆಲೆ ಸಲ್ಲದ
ನದಿನದಗಳು
ಮವ ಬೀರುತ
ಅದೊ ಬಂದವು
ಇದೊ ಸಂದವು
ನೀರ್ ಮಿಕ್ಕಿತು
ಕಡಲುಕ್ಕಿತು
ಓ ಮನ್ಮನ
ಮೀಯ್ ತನುಮನ
ತನುಮನ ಧನ
ಭರತಾರ್ಪಣವು!

ಆರ್ಯರ ಕುಲ
ದ್ರಾವಿಡ ಫಲ
ಆಕೊ ಚೀಣರು
ಶಕ ಹೂಣರು
ಪಾರಸಿಕರು
ಪಾಠಾಣರು
ಮೊಗಲ್ ರಸಿಕರು
ಪ್ರಿಯ ಪ್ರಾಣರು

ಒಂದೇ ಶಿರ
ಒಂದೇ ಮನ
ಈ ತನುಮನ
ಭರತಾರ್ಪಣವು!

ಆ ಪಡುವಲ-
ದಾ ಬಾಗಿಲ
ಅಗೊ ತೆರೆಯಿತು
ಇಗೊ ನೆರೆಯಿತು
ಹೊಸ ಹೊಸ ಜನ
ಸುವಿಲಕ್ಷಣ
ಹೊಸ ಸಂಗತಿ
ಸೋಜಿಗ ಶ್ರುತಿ
ಹೊಸ ಕಾಣಿಕೆ
ಮನಗಾಣಿಕೆ!
ಒಂದೇ ಶಿರ
ಒಂದೇ ಮನ
ಈ ತನುಧನ
ಭರತಾರ್ಪಣವು!

ಒಂದೇ ಶಿರ
ಒಂದೇ ಮನ
ಭಾರತ ನರ
ನಾರಾಯಣ
ತಲೆದೂಗುವೆ
ತಲೆ ಬಾಗುವೆ
ಕೈ ಮುಗಿಯುವೆ

ಮೈಯೊಗೆಯುವೆ
ನಿನ್ನಡಿಯೊಳು
ನನ್ನಯ್ಯನೆ
ಕಲ್ಯಾಣವ
ಮನಗಾಣುವ
ಭಾರತ ನರ
ನಾರಾಯಣ
ತನುಮನಧನ
ಸಿನಗರ್ಪಣವು!

[ಶ್ರೀ ರವೀಂದ್ರ ಗುರುದೇವನ 'ಹೆ ಮೋರ ಚಿತ್ತ ಪುಣ್ಯ ತೀರ್ಥ ಜಾಗೋರೆ ಧೀರೇ' ಎಂಬ ಗೀತಾಂಜಲಿಯ ಬಂಗಾಲಿ ಪದದ ಕನ್ನಡ ಭಾವಾನುವಾದವು; ಇದು ಶಾಂತಿನಿಕೇತನದಲ್ಲಿ ಅಂತರ್ರಾಷ್ಟ್ರೀಯ ಪದವು.]

— ಪ್ರಹ್ಲಾದ.

---

# ಗೀತೆಗೆ

ಒಂದೆ ತಂತಿಯ ನೀವಿದೇತಕೆ ನುಡಿಸುತಿರುವಿರಿ ಸುಮ್ಮನೆ?
  ನಾಲ್ಕು ತಂತಿಯ ಮೀಂಟಿ ಕೆರಳಿಸಿ ಎಲ್ಲ ತಾಳಕು ನುಡಿಸಿರಿ.

ನಯವು ನುಣುಪು ಸವಿಯು ಮೆಲುಪು ಬೇಸರಾಯಿತು, ನಿಲ್ಲಿಸಿ;
  ಹಿರಿಯ ರಾಗದ ಮದವ ಕೆರಳಿಸಿ ಗಂಡುತಾನವ ನುಡಿಯಿಸಿ

ಸುಳಿಸಿ ಸುಯಿಸಿ ನವೆಸಿ ನೋಯಿಸಿ ಗಾಸಿಪಡಿಸುವಿರೇತಕೆ?
  ಸಿಡಿವ ರೋಷವ ಚಲವ ಹರುಷವ ಗೆಲುವ ಹುರುಪನು ಹರಡಿಸಿ.

ಒಡೆದ ಸರಸವ ಮುರಿದ ಮನಗಳ ಒಲಿದ ಜೀವದ ವಿರಹವ
  ಕರೆಸಿ ತೋರಿಸಿ ತರಿಸಿ ಕಂಬನಿ ಧೈರ್ಯವೇತಕೆ ಮುರಿವಿರಿ?

ಸಡಿಲ್ವ ಮನಗಳ ಬಿಗುಪನೇರಿಪ ವೀರಭರವಸೆಯೂಡಿರಿ,
  ಜೀವರಸಗಳನೆರೆದು ನೆನಸಿರಿ ಬಾಳುವಾಸೆಯ ಮೆರೆಯಿಸಿ.

ಕೈಗಳೋಡಲಿ ಬೆರಳು ಹಾರಲಿ ನಾದಸೊಡೆ ಸೂದೆಗರೆಯಲಿ
  ನಲಿಸಿ ಕೂಗಿಸಿ ಉಳಿಸಿ ನಗಿಸುವ ಗಾನದೈಸಿರಿ ಹಾಯಿಸಿ.

ಒಂದು ತಂತಿಯನೆಳೆದು ಸೆಳೆದು ಎದೆಯ ಸೀಳುವಿರೇತಕೆ?
  ಎಲ್ಲ ತಂತಿಗಳೆಲ್ಲ ರಾಗದ ಎಲ್ಲ ಸಂತಸ ಸೂಸಿರಿ.

—ವಿ. ಸೀ.

# ಎನ್ನ ಮುದ್ದಿನ ಗಿಣಿಯೆ!

ಎನ್ನ ಮುದ್ದಿನ ಗಿಣಿಯೆ! ಎನ್ನ ಸೊಬಗಿನ ಕಣಿಯೆ!
ಎನ್ನ ಭಾಗ್ಯದ ಸಿರಿಯೆ! ಚೆಲುವಿನ ಕುವರಿಯೆ!
ನಿನ್ನ ಜನನದ ದಿನಕೆ—(ಚೆನ್ನಾಯ್ತ್ತಲೆಗೆ! ಮನಕೆ
ಸನ್ನುತವೆ? ತಡೆ ಮಗಳ ಈ ಕಿರುಕುಳಗಳ.)

ಬಾರೆನ್ನ ಮನೆ ಬೆಳಗೆ! ಸಾರುಬೇಗನೆ ಬಳಿಗೆ;
ತೋರು ನಿನ್ನಯ ಮೊಗವ; ಬೀರೆನಗೆ ಸೊಗವ.
ಮೀರಿಹುದು ಸುಖವಿಂದು—(ಯಾರೆ? ಬೇಗನೆ ಬಂದು
ನೀರ ಬಿಂದಿಗೆ ಎಳಕೊ! ಹೊ! ಕವಚಿದಳಕೊ!)

ಕಂದ! ಜನನದ ದಿನದ ಸಂದ ನಿನ್ನಯ ಬಿನದ
ದಿಂದ ನಲವಾಂತುದೆದೆ ಬಂದಪ್ಪು ಮುದದೆ.
ನಿಂದು ನೋಡುವುದೇಕೆ?—(ಮುಂದೋಡಿಹಳು! ಜೋಕೆ!
ಸುಂದರಿಯೆ! ಪೋಂಪೋಗು! ಹಾಕಿದಳು ಲಾಗು!)

ಮಗಳೆ! ಮಾಣಿಕಗೊಂಬೆ! ತೆಗೆದು ತಕ್ಕಿಸಿಕೊಂಬೆ!
ನಗುನಗುತ ಬಾರೆನ್ನ ಬಗೆಗೊಳಿಪ ರನ್ನ!
ಸಿಗಲಾರೆಯಾ ನನಗೆ—(ನೆಗೆವಳಿದೊ ಕಿರುಮನೆಗೆ
ತೆಗೆದೆನ್ನ ಮಸಿಕುಡಿಕೆ! ಬೇಗವಳ ಹುಡುಕೆ!)

ಪುಟ್ಟಮ್ಮ! ನೀ ಮುತ್ತ ಕೊಟ್ಟೆನ್ನನಪ್ಪುತ್ತ
ಹುಟ್ಟು ದಿನದುಡುಗೊರೆಯ ಪಡೆಯುಬಹುದರಿಯು!
ತಟ್ಟನಿಲ್ಲಿಗೆ ಬಾರೆ—(ಬೊಟ್ಟಿಟ್ಟವಳ ಮೋರೆ
ನಿಟ್ಟಿಸಲಿ ಮನದನ್ನೆ! ಮಸಿಗಾಯ್ತು ಸೊನ್ನೆ!)

ಅಮ್ಮಣ್ಣಿ! ಬಾ, ನಿನ್ನನೊಮ್ಮೆ ತಬ್ಬುವೆ, ಚಿನ್ನ!
ಸುಮ್ಮಾನವಹುದಿಂದು ಜನ್ಮದಿನವೆಂದು.
ಸಮ್ಮುಖಕೆ ಬಾ. ಪುರುಳೆ!—(ಸುಮ್ಮನಿರಳೀ ತರಳೆ;
ಗುಮ್ಮನೆಂದಿದೂ ಬಂದಳೇನದರ ಚಂದ!)

ಕಡುಬೆಡಗಿನೆಲೆ ಬಾಲೆ! ಇಡುವೆ ಮುತ್ತಿನ ಮಾಲೆ
ಬಿಡೆನಿದಕೊ ಸಿಕ್ಕಿದಳು! ಮುತ್ತನಿಕ್ಕಿದಳು!
ಒಡನೆ ಮುದ್ದಾಡಿದೆನು—(ಮಡದಿಮಣಿ, ನೋಡಿದನು.
ಬೆಡಗಲ್ಲವೇ ಪೇಳೆ ಮುತ್ತಿನೀ ಮಾಲೆ?)

—ಉ. ಪಾ. ರಾ.

# ನಾವೆಲ್ಲರು ಒಂದೆ

ಮರದಡಿ ಕೊಳದಡಿ
ನೆರಳಲಿ ಬಿಸಲಲಿ
ಹರಿದಾಡಿ ಹಾರಾಡಿ
ಹರಿಸದಿ ಬೆರೆತೆವು.

ಎಲೆಗಳು ಪಿಸಪಿಸ
ಸುಳಿಗಾಳಿ ಸುಯಿಸುಯಿ
ಎಳೆಬಿಸಿಲ ಕಾದೆವು
ಕೊಳಲೂದಿ ಮರೆತೆವು.

ಅರ್ಥವು ಇಲ್ಲದ
ಒಡನಾಟ ಎಮ್ಮದು
ಅರ್ಥವು ಅಂಟದ
ಸಂಬಂಧವೆಮ್ಮದು.

ಹೆಜ್ಜೆಯ ಜಾಡಲಿ
ಹೆಜ್ಜೆಯನಿಕ್ಕುವ
ಗೆಜ್ಜೆಯ ಕಾಲಿನ
ಅಜ್ಜರು ನಾವೆಲ್ಲ.

ಎಳೆನಗು ಕಿಲಕಿಲ
ಬಳಬಳ ಕಣ್ಣೀರು
ಕಲಕಲ ಮಾತಿನ್ನು
ಗೆಲವು ಸೋಲಲ್ಲಿ.

ಲಾ

ಎಲ್ಲೆಲ್ಲಿ ಬಾಲರು
ಇಲ್ಲೆಲ್ಲ ಸೇರುತ
ಚಿಣ್ಣರೊಂದಾದೆವು
ಅಣ್ಣತಮ್ಮಂದಿರು.

ಎಲ್ಲಿದ್ದರೂ ನಮ್ಮ
ಸೊಲ್ಲೆಲ್ಲ ಒಂದೇ
ಅಂದದಾನಂದದ
ಚಂದುಳ್ಳ ಬಾಲರ

ಎಲ್ಲರು ಒಂದೆಂದು
ಎಂದೆಂದು ಹೇಳುವ
ಎಲ್ಲರು ಒಂದೆ
**ನಾವೆಲ್ಲರು ಒಂದೆ.**

— ಹೊಯಿಸಳ.

---

# ಯಾವ ಕಾಲದ ಶಾಸ್ತ್ರವೇನು ಹೇಳಿದರೇನು?

ಯಾವ ಕಾಲದ ಶಾಸ್ತ್ರವೇನು ಹೇಳಿದರೇನು?
ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು?
ಎಂದೊ ಮನು ಬರೆದಿಟ್ಟುದಿಂದೆಮಗೆ ಕಟ್ಟೇನು?
ನಿನ್ನೆದೆಯ ದನಿಯೆ ಋಷಿ! ಮನು ನಿನಗೆ ನೀನು!

ನೀರಡಿಸಿ ಬಂದ ಸೋದರಗೆ ನೀರನು ಕೊಡಲು
ಮನುಧರ್ಮಶಾಸ್ತ್ರವೆನಗೊರೆಯ ಬೇಕೇನು?
ನೊಂದವರ ಕಂಬನಿಯನೊರಸಿ ಸಂತೈಸುವೊಡೆ
ಶಾಸ್ತ್ರಪ್ರಮಾಣವದಕಿರಲೆ ಬೇಕೇನು?

ಪಂಚಮರ ಶಿಶುವೊಂದು ಕೆರೆಯಲ್ಲಿ ಮುಳುಗುತಿರೆ
ದಡದಲ್ಲಿ ವಿಾಯುತ್ತ ನಿಂತಿರುವ ನಾನು
ಮುಟ್ಟಿದರೆ ಬ್ರಹ್ಮತ್ವ ಕೆಟ್ಟು ಹೋಗುವುದೆಂದು
ಸುಮ್ಮನಿದ್ದರೆ ಶಾಸ್ತ್ರಸಮ್ಮತವದೇನು?

ಅಂತು ಮನು ತಾನು ಹೇಳಿರಲಾರನಯ್ಯಯ್ಯೊ
ಹೇಳಿದ್ದರವನನೂ ಶಾಸ್ತ್ರದೊಳೆ ಸುತ್ತಿ,
ಸ್ವರ್ಗ ಹೋಗಲಿ ಮತ್ತೆ, ನರಕ ಬಂದರು ಬರಲಿ,
ಎದೆಯ ಧೈರ್ಯವ ಮಾಡಿ ಬಿಸುಡಾಚೆಗೆತ್ತಿ!

ಸ್ವರ್ಗ ಹೋಗುವುದಿಲ್ಲ, ನರಕ ಬರುವುದು ಇಲ್ಲ;
ಸ್ವರ್ಗ ನರಕಗಳೇನು ಶಾಸ್ತ್ರಸ್ಥವಲ್ಲ
ಎದೆಯ ದನಿ ಧರ್ಮನಿಧಿ! ಕರ್ತವ್ಯವದುವೆ ವಿಧಿ!
ನಂಬದನು; ಅದನುಳಿದು ಋಷಿಯು ಬೇರಿಲ್ಲ!

ಹಿಂದಿನಾ ಋಷಿಗಳೂ ಮಾನವರೆ ನಮ್ಮಂತೆ,
ಅವರ ಶಾಸ್ತ್ರವು ಅವರ ಕಾಲಕ್ಕೆ ಮಾತ್ರ;
ಕಾಲಕ್ಕೆ ತಕ್ಕಂತೆ, ದೇಶಕ್ಕೆ ತಕ್ಕಂತೆ,
ನಮ್ಮ ಹೃದಯವೆ ನಮಗೆ ವರಧರ್ಮಸೂತ್ರ!

—ಕೆ. ವಿ. ಪುಟ್ಟಪ್ಪ.

---

# ಬನದ ಕುಸುಮ

ಯಾರಿಗಾಗಿ ಅರಳಿನಿಂತು,
ಇಂತು ಮೆರೆಯುವೆ?
ಯಾರ ದಾರಿ ಕಾಯ್ದು ಕಾಯ್ದು,
ವಿಫಲವಾಗಿ ಮನದಿ ನೊಂದು,
ಮುಂದೆ ಬಾಳು ಸಲ್ಲದೆಂದು,
ಬಾಡಿ ಬೀಳುವೆ.
ಸತ್ಯವಾಗಿ ಪೇಳು ಬನದಿ
ಬೆಳೆದ ಕುಸುಮವೆ.

ಅಂದಿನಾಸೆ ಇಂದು ಕನಸು
ಭ್ರಾಂತಿಯಾದುದೆ?
ಬಿಸಿಲು ಗಾಳಿ ಮಳೆಯೆನ್ನದೆ,
ಕಷ್ಟನಷ್ಟ ಸುಖವೆನ್ನದೆ,
ಖಗಮಿಗಗಳ ಕೂಡಾಡಿದೆ,
ಇಂದು ಅರಳಿದೆ;
ಮೊಗ್ಗೆಯಿಂದ ಎಸಳು ಬಿರಿದು
ಸೊಬಗ ತೋರಿದೆ.

ಯಾವ ಕುಂದು ನಿನ್ನೊಳಿಹುದು
ಚೆನ್ನ ಕುಸುಮವೆ!
ಬಣ್ಣಬಣ್ಣದೆಸಳು ಪಡೆದು,
ಮೃದು ಪರಿಮಳ ದೆಸೆಗೆ ಮಿಡಿದು,
ಮತ್ತದುಂಬಿಗಮನ ತಡೆದು,
ವನದಿ ಮೆರೆಯುವೆ?
ಆದರೇನತೃಪ್ತಬಯಕೆ
ಗಾಗಿ ಮರುಗುವೆ.

ಪುರದೊಳರಳ್ವ ಪೂವಿಗೆಂತು
ಮೆಚ್ಚಿ ಕುಣಿವರೊ!
ಅಂಗನೆಯರು ನೀರನಿತ್ತು,
ಬಳುಕಿ ಬಂದು ಗಿಡದೆ ಕಿತ್ತು,
ಒಮ್ಮೆ ಮೂಸಿ ಮುತ್ತನಿತ್ತು,
ಮುಡಿಯೊಳಿಡುವರು;
ಮತ್ತೆ ಕೆಲರು ಈಶ ಚರಣ–
ದೆಡೆಯೊಳಿಡುವರು.

ಇದುವೆ ಜನುಮ ಮುಕ್ತಿ, ನಿನಗೆ
ಲಭಿಸದಾಯಿತೆ!
ಏಕಾಂತದಿ ತಪಪ ಗೈದು,
ಮೂರದಾಸೆಯುಸಿರ ತಳೆದು,
ಕಾಲ ಸಮೆದುದೆಲ್ಲ ಬಿದಿಯು,
ಬೀಳುಗಳೆಯಿತೆ!
ಒಡನಾಡಿದ ಎಲರು ಇಂದು
ಶತ್ರುವಾಯಿತೆ!

ನಿನ್ನ ಬಾಳು ವಿಧವೆ ಬಾಳು
ಒಂದೆ, ಬಲ್ಲೆನು;
ಆದರೇನು ಸುಧೆಯ ಬಿಂದು,
ಒಂದ ನೀನು ಸವಿಯುವೆಂದು,
ಮಾಡಲಾಗದೇಕೆ ಎಂದು,
ಮನದೊಳೆಣಿಪೆನು;
ವಿಧಿಯು ನಿನ್ನೊಳೇಕೆ ಮುನಿದ–
ನೆಂಬುದರಿಯೆನು

ಬನದ ಪೂವೆ, ಕೊರಗಬೇಡ,
ದಿನವ ಕಾಣುವೆ!

ಅಂದು ಬನದ ರಾಣಿಯಾಗಿ,
ಹರಿಯ ಕಂಠಮಾಲೆಯಾಗಿ,
ರಮಣನೊಲಿದ ಸುದತಿಯಾಗಿ,
ಸುಖದಿ ಬಾಳುವೆ.

ಜಗಕೆ ಜಸದ ನೀತಿ ಪಥವ–
ನೊಂದ ತೋರುವೆ.

—ದೇವೇಂದ್ರ ಶೀಣ್ಣ.

---

# 'ಅದ್ದೋ'

ಎಳೆದೆಂಗಿನ ಮರ ಸಿಂಗರಿಸಿಹುದೆ-
ನ್ನಂಗಳವನು, ನಾ ಬೈಗಲ್ಲಿ
ಕುಳಿತನುಭವಿಸುವ ಆ ಆನಂದವ
ಪೊಂದಲು ಸಾಧ್ಯವೆ ಬೇರೆಲ್ಲಿ?

ಆರಾಮಾಸನದಲ್ಲೊರಗಿರೆ ನಾ
ಮುದವೀವವು ಬಗೆಗೆಡಬಲದಿ
ಕಂಗೊಳಿಸುವ ಚೊಚ್ಚಲ ಮಗುವೆತ್ತಿಹ
ಕಡುಬೆಡಗಿನ ಕಿರುನಗೆ ತಾಳ್ದ
ಅಂಗನೆಯರ ತೆರ ಗೊನೆ ಹೊತ್ತಿಹ ಕಿರು-
ದೆಂಗುಗಳಂದವನೇನೆಂಬೆ!

ಹಿಂದಿಲಿ ಸತ್ತಿಗೆ ಚಾಮರ ಸೇವೆಗೆ
ನಿಂದಿದೆ ಕೋಮಲ ಬಿಂಬತರು;
ಮುಂದಿಲಿ ಹಲಸಿದೆ ತುಂಬಿದ ಬಳಗದ
ಅಜ್ಜಿಯ ಗಾಂಭೀರ್ಯವ ತಾಳಿ.

ಬಾಲಕಿಯರು ತೋಷದಿ ಬಗೆವಣ್ಣದ
ಉಡುಗೆಯೊಳೊಪ್ಪುತಲೋರಣಿಸಿ
ತಲೆದೂಗುತ ಸೊಬಗಿಂದೂಲೆದೂಲೆಯುತ
ಕೋಲಾಟವನಾಡುವ ತೆರದಿ
ಬಣ್ಣದ ತಳಿರಿನ ಅಲರಿನ ಗಿಡಗಳು
ನಲಿವವು ಸಾಲಿಂದೆಡಬಲದಿ.

ಬಳಿಯಲಿ ಬಾಲೆಯರೀರ್ವರು ನಾಚುತ
ಅಲರಿನ ಗೊಂಚಲ ಕಾಣಿಕೆಯ
ಆರ್ಪಿಸೆ ಕೈನೀಡುವ ಪರಿ ಬಳುಕಿವೆ
ಸುಮ-ಪೂರಿತ ಪಾರಿಜಾತ ಜಾಲಿ.

ಎನ್ನಯ ಭದ್ರಾಸನಕಿದೆ ಸೊಂಪಿನ
ತಳಿರಿನ ತೋರಣ ಮೇಲ್ಗಟ್ಟು;
ಸುತ್ತಲುಮುತ್ತಲು ರಾಜಿಸುತಿರ್ಪುದು
ಹಸುರಿನ ಮಂಟಪವದರಲ್ಲಿ
ಹಲಸೆಳೆದಂಗಡಿಕೆಯು ಸಿಂಗಾರವು
ಸಹಜದೆ ಶೋಭಿಪುದಲ್ಲಲ್ಲಿ.

ಚಿತ್ರಿಕ ಬರೆಯದ ಶಿಲ್ಪಿಯು ಕೊರೆಯದ
ಮಾನವ ಬುದ್ಧಿಯು ನಿರ್ಮಿಸದ
ಸೊಗಮಂ ಕಳೆಯಂ ಪೊಸತಂ ಬೀರುವ
ಕೈವಾಡವ ತೋರ್ದವನೆಲ್ಲಿ?
ಚೇತನಮಯವಾಗಿಹುದೀ ಹಸುರು–
ಇದರಲ್ಲಿದೆಯೋ ದೇವನ ಉಸಿರು?
ಜೀವಿತವಾಗಿದೆ ಮೆರೆವೀ ದೃಶ್ಯ–
ಇದುವೋ ಆತನ ಶಕ್ತಿರಹಸ್ಯ?

ಬೈಗಿನ ಗಾಳಿಯ ಸುಯ್ಲಿನ ಗಾನಕೆ
ತಲೆದೂಗುವ ಸೋಗೆಗಳೆಡೆಯಿಂದ
ತೋರ್ಪುದು ತಿಳಿಬಿಳಿ ಮೋಡವು ಬಾನಿಲಿ
ಮುಸ್ಸಂಜೆಯ ಪಡುವಣ ಚಂದಿರನ
ಬಳಿಗದು ಸಾರಲು ಕ್ಷಣಕ್ಷಣ ಪರಿಪರಿ
ವರ್ಣದೊಳದ ಮಿರುಗಿಪ ಕೈಯೆಲ್ಲಿ?

ಲೋಕಕೆ ಬಾನಿನ ಮೇಲ್ಗಟ್ಟಟ್ಟು
ಮಿಣಿಮಿಣಿಗುಟ್ಟುವ ತಾರೆಗಳಿಟ್ಟು
ನಡೆಯಿಪ ಅದ್ಭುತ ಶಕ್ತಿಯ ಯುಕ್ತಿಯ
ಮೂರ್ತಿಯು ನೆಲೆಸಿಹ ತಾನೆಲ್ಲಿ?

ಇಂತೀ ಸುಂದರ ದೃಶ್ಯಗಳಿಂದಲಿ
ಕಣ್ಮನ ತೃಪ್ತಿಯಗೊಳ್ಳುತಲವುಗಳ
ಕರ್ತೃವನರಸುವ ಜಾಲದಲಿ
ಸಿಲುಕುವ ಸಮಯದಿ ಕಂದನನೆತ್ತಿಹ
ಮಡದಿಯು ಬಂದಳು ಮೆಲ್ಲಲ್ಲಿ.

ಮುಂದಿಲಿ ಕುವರಿಯು ಪಾಡುತಲಾಡುತ
ಕಿರಿತಮ್ಮನ ನಗಿಸುತ ತೋಷಗೊಳೆ,
ಹಿಂದಿಲಿ ಸೆರಗಿನ ಮರೆಯಲಿ ಕುವರನು
ತಮ್ಮಗೆ ಕಣ್ಣುಮುಚ್ಚಾಲೆಯ ಕಲಿಸುತಿರೆ,
ತೋಳಿನ ಕಂದನು '**ಅದ್ದೋ**' ಎನ್ನುತ
ತಾಯಿಯ ಕಂಠವನಪ್ಪುತಲತ್ತಿಂ—
ದಿತ್ತಿಗೆ ಒಲೆಯುತ ನಲಿಯುತಿರೆ,

ಮುಮ್ಮಕ್ಕಳ ತಾಯೆಂಬುವ ಪೆರ್ಮೆಯು
ಅಬ್ಬೆಯ ಎದೆಯನು ಉಬ್ಬಿಸಿ ಕಿರುನಗೆ
ವೆರಸಿದ ಮೊಗದಲಿ ಹೊರಸೂಸೆ,
ಎಳೆವರೆಯದ ಪೆಣ್ಣಿನ ಮುಗ್ಧತೆ ಬಲು
ಚೆಲುಚೆಲುವಾಗಿಯೆ ಶೋಭಿಸಿರೆ,

ದೃಶ್ಯಕೆ ದೃಶ್ಯವು ಹಿನ್ನೆಲೆಗೊಟ್ಟು
ಸೊಗವೇರಿಸಿ ನವಕಾಂತಿಯ ಬಿಟ್ಟು
ಕಳಕಳ ಕಳೆಗೊಂಡುವು ಚೆಲುವಾಗಿ.
ಪೂರ್ಣತೆ ತಳೆದೀ ಸೃಷ್ಟಿಯ ಚಂದವ
ಮನಗಾಣುತ ಬಗೆಸಾಗಿತು ಮುಂದಕೆ
ದೇವನು ಎಲ್ಲಿಹ? ಸಗ್ಗವು ಎಲ್ಲಿದೆ?
ಇಲ್ಲಿಯೊ? ಎಲ್ಲಿಯೊ? ಮೇಲೆಯೊ? ಎಂದು.

'ಅದ್ದೋ' ಎಂದಳು ಕುವರಿಯು ಮೇಲಕೆ ನೋಡಿ,
'ಅದ್ದೋ' ಎಂದನು ಕಂದನು ತಾಯನು ನೋಡಿ,
'ಅದ್ದೋ' ಎಂದಳು ತಾಯಿಯು ಎನ್ನನು ನೋಡಿ,
'ಅದ್ದೋ' ಎಂದೆನು ನಾ ಮಗು ನಗುವುದ ನೋಡಿ.

**ಸು**ತ್ತಲು ನೋಡಲು ಸೊಗದಿಂ ಮೆರೆಯುವ
ಗಿಡಮರ ಹೂಗಾಯಿಗಳೆಲ್ಲ
ಬೀಸುವ ಗಾಳಿಯ ಸುಯ್ಲಿನ ಗಾನದಿ
'ಅದ್ದೋ ಅದ್ದೋ' ಎಂದಂತಾದುದು
ಒಂದನ್ನೊಂದಾನಂದದಿ ತೋರುತಲಿ.

**ಮೇ**ಲಕೆ ನೋಡಲು ಬಾನಿಲಿ ತೇಲುವ
ಮೇಘವು ಚಂದಿರ ತಾರೆಗಳು
ಬೀಸುವ ಗಾಳಿಯ ಸುಯ್ಲಿನ ಗಾನದಿ
'ಅದ್ದೋ ಅದ್ದೋ ಅದ್ದೋ' ಎಂದುವು
ಒಂದನ್ನೊಂದಾನಂದದಿ ತೋರುತಲಿ.

— ಕೊರಡ್ಕಲ್.

---

# ನೀರಗುಳ್ಳಿ

ನೀರಗುಳ್ಳಿ ನೀರಗುಳ್ಳಿ
ನೀರ ಮೇಲೆ ತೇಲುತಿಹುವು— ಪಲ್ಲ

ಒಂದು ಮೂರು ನಾಲ್ಕು ಹತ್ತು
ಬಂದು ದೊಡ್ಡ ಗುಳ್ಳಿಯೆಡೆಗೆ
ತಂದೆಯತ್ತ ಮಕ್ಕಳಂತೆ
ಚೆಂದವಾಗಿ ಸಾಗುತಿಹುವು.

ಓಡುತೋಡುತೊಂದನೊಂದು
ಕೂಡುತೇಳು ಬಣ್ಣಗಳನು
ಮಾಡಿ ತೋರುತಿಹುವು, ಮತ್ತೆ
ಆಡಿಯಾಡಿ ನಲಿಯುತಿಹುವು.

ನೀರೊಳಾಗಿ ನೀರೊಳಲೆದು
ನೀರೊಳಡಗಿ ಹೋಯ್ತುದೆತ್ತೊ!
ತೋರದದರ ಗುರುತು! ಗುಳ್ಳಿ
ದೂರ ದೂರ ದೂರ ಹೋಯ್ತು.

ದೇವನೊಡಲೊಳಿಂತು ಜಗದ
ಜೀವರಾಶಿ ತೋರಿ ಮತ್ತೆ
ದೇವನಲ್ಲಿ ಸೇರುತಿಹುವು
ಸಾವು ಸುಳ್ಳು ಸುಳ್ಳಲೇ!

— ಶಾಲಿ ರಾಮಚಂದ್ರರಾಯ.

---

# ಗುರಿ

ಹುಟ್ಟು ಹುಟ್ಟು ಹುಟ್ಟ ನೋಡೆ
ಹುಟ್ಟಿ ಬೆಳೆದ ಜನರಿಗೆಲ್ಲ
ಅಟ್ಟಹಾಸ ಪಟ್ಟ ಸಗ್ಗ ಸೊಗದ ಸವಿಯದು
ಹುಟ್ಟಿ ಬಂದುದೇಕೆ ಹುಟ್ಟುಗುರಿಯೆ ತೋರದು.

ಹಿರಿಯನಾಗಿ ಬೆಳೆದು ಜನುಮ
ಗುರಿಯನರಿತು ಬಾಳಲೆಂದು
ಗುರಿಯನರಿಯಲೆನ್ನ ಮನದಿ ಕುರಿಯಲೆಣಿಸುವೆ
ಕುರಿಯ ಹೋಗಿ ಹುಚ್ಚನಾಗಿ ಹುಟ್ಟ ಜರಿಯುವೆ.

ಹಗೆಗಳನ್ನು ಅಟ್ಟಮೆಟ್ಟಿ
ಜಗದೊಳೆಲ್ಲ ಗುಡಿಯ ಕಟ್ಟಿ
ಜಗದ ಪುರುಷನಾಗಿ ಧೀರವೀರನಾಗಲೆ?
ಬಗಿವ ಹಗೆಯ ಅಡಿಯ ಹಿಡಿವ ಹೇಡಿಯಾಗಲೆ?

ನಾಡ ಜನರ ಜೀವಿತವನು
ಹಾಡಿ ನಾಡಿನಮರನಾಗಿ
ನಾಡ ಜೀವಗಳೆಯ ತೋರ್ಪ ಕವಿಯೆ ಆಗಲೆ?
ಮೂಢನಾಗಿ ಬೆಳೆದು ನಾಡ ಗೂಬೆಯಾಗಲೆ?

ಸುತ್ತಲೆಲ್ಲ ಜಗವ ನೋಡೆ
ಕತ್ತಲನ್ನೆ ತೋರುತಿಹುದು
ಕತ್ತನೆತ್ತಿ ನೋಡೆ ಮಿರುಗಲಿರುವ ಸಾಗರ
ಎತ್ತನೋಡಿದತ್ತ ನಗುವ ಚಿಕ್ಕೆಯಾಗರ.

ಮರಳಿ ಮರಳಿ ಸಾವಿಗಾಗಿ
ಬರುವ ಜನರ ಬಾಳಿಗಾಗಿ
ಜರಿದು ನಗುವ ತಾರೆಗಾಗಿ ಮನದಿ ಮರುಗಲೆ?
ತಿರೆಯ ತಾರೆಯಾಗಿ ಜಸದೆ ಮಿರುಗಿ ಬಾಳಲೆ?

ಮನವಿದೊಂದು ಕನಸಿನೊಟ್ಟು
ಮನುಜನೊಬ್ಬನದರ ಹುಟ್ಟು
ಜನುಮ ಗುರಿಯನೇನನಿಟ್ಟು ಏನ ಮಾಡುವೆ!
ಕೊನೆಗಳಿಲ್ಲದೆಣಿಕೆಗಳಲಿ ಕನಸ ಕಾಣುವೆ.

ಹುಟ್ಟು ಹುಟ್ಟು ಹುಟ್ಟ ಕೂಡಿ
ಹುಟ್ಟ ಬಂದು ಬಾಳ್ವೆ ಮಾಡಿ
ಹುಟ್ಟು ಗುರಿಯ ಹುಡುಕಲೆಣಿಸಿ ಬರಿದೆ ದಣಿವುದೆ?
ಹುಟ್ಟುಗುರಿಯ ಗುಟ್ಟು ಮರಳಿ ಹುಟ್ಟದಿರುವದೆ?

— ಹೇಜೀಬ.

---

# ಅವನೇ!

ಅವನೊಂದರಿವಿಕೆಗೆ,
ಜೀವಜಾಲಗಳೆಲ್ಲ,
ಸಾವು–ನೋವುಗಳೆಲ್ಲ–
ದಲೆಯುತಿಹವೋ!
ನಿಮಿಷದಿಂ ದಿನವಾಗೆ,
ದಿನದೊಳಬ್ದವು ಸಾಗೆ,
ಶತಮಾನ ಶತವಾಗ–
ಲರಿಯದಿಹನು.
ವೇದಗಳ ಬೋಧೆಯಲಿ,
ಸಾರುವ ಪುರಾಣದಲಿ,
ಶಾಸ್ತ್ರಗಳ ಸೂತ್ರದಲಿ,
ಸೇರದಿಹನು.
ತಾರ್ಕಿಕರ ತರ್ಕದಲಿ,
ಮೌನಿಗಳ ಮೌನದಲಿ,
ತಾತ್ವಿಕರ ತತ್ವದಲಿ,
ಸಿಲುಕದಿಹನು.

—ಅಳೆಯಲಾರದ ಆಳ–
ದಳತೆಯೊಂದಿರುವಲ್ಲಿ–
ನೆಲೆಸಿರುವನೆಂದೆಲ್ಲ,
ವಾದಿಸುವರು.
ಆಕಾಶದವಕಾಶ–
ದರಮನೆಯನರಿತಲ್ಲಿ,
ಬೇಕಾದ ಸಂಪದವ
ಸಾಧಿಸುವರು.
ಬಾಹ್ಯತೆಯಸಹ್ಯದಲಿ,
—ಅಂತರ್ಯದಾಳವನು–

## ಕಾವ್ಯಸಾಮ್ರಾಜ್ಯ

ಗಾಹಿಸುವಗಾಧದಲಿ,
        ಶೋಧಿಸುವರು.
ಗಗನದಗಲದೊಳರಿತು,
–ಹಸನಾದ ಕುಸುಮವನು–
ಸೊಗಸಾದ ಸೌಸವಕೆ,
        ಮೋದಿಸುವರು.

ಕಾಣಲಾರದ ತಾಣ–
ದೊಳಗಿರುವ ಕಲ್ಪನೆಯು,
ಜ್ಞಾನ–ವಿಜ್ಞಾನವಿದು
        ವ್ಯರ್ಥವಲ್ಲಾ!
ಪೋಗದೂರಿಗೆ ಬರೆಯು–
ದೊಂದು ಪತ್ರವನಿತ್ತು
ಸಾಗಿಸುವ ಸಾಹಸದೊ–
        ಳರ್ಥವಿಲ್ಲ.
ಸಂಸಾರದಾ ಸಾರ–
ಸರ್ವಸಂಗ್ರಹದಲ್ಲಿ,
ಸೇರದಿರುವನ ಕಂಡು
        ಸಾರ್ಥವಿಲ್ಲ.

ಬೆಳಕನ್ನು ಪೊತ್ತೆತ್ತಿ,
ತಿಳವಿಕೆಯನಚ್ಚೊತ್ತಿ,
ಬೆಳಗುವರುಣನೊಳಿರ್ಪ
        ಅರುಣತೆಯದಾರ್?
ಮೂಡಣಿಂದೆದ್ದ, ಪಡು–
ವಣ ಕಡಲಿನೊಳಗಿದ್ದ,
ಕತ್ತಲೆಯಕಿತ್ತಾರ್ಯ–
        ನಾರ್ಯತೆಯದಾರ್?

## ಕಾವ್ಯಸಾಮ್ರಾಜ್ಯ

ಗಾಢಾಂಧಕಾರದಲಿ,
ಭೀಕರದ ಮೌನದಲಿ,
ಗೂಢತೆಯ ಜೋಡಿಸಿಹ,
ನಿರ್ಲಿಪ್ತನಾರ್?
ಬಾಲಕರ ಬಾಲ್ಯದಲಿ,
ಚೆನ್ನಿಗರ ಚೆಲುವಿನಲಿ,
ಲೋಲತೆಯ ಪಾಲಿಸಿಹ,
ಲೀಲಾತ್ಮನಾರ್?
ಕವಿಯ ಮಾತಿಗೆ ಬಂದು,
ಭವ್ಯ ಭಾವವ ತಂದು,
ನವ್ಯಕಾವ್ಯವ ರಚಿಸೆ
ಸಾಹಾಯ್ಯನಾರ್?

ಶುದ್ಧ ಹೃದಯನು ಪಡೆವ-
ನಿತ್ಯಮುಕ್ತಿಯೊಳಿರುವ,
ಸತ್ಯ-ಶಾಂತಿಯ ಪ್ರೇಮ-
ಪೂರತೆಯವನೇ!
ಅರುಣನರುಣತೆಯಲ್ಲಿ,
ಸೂರ್ಯನಾರ್ಯತೆಯಲ್ಲಿ,
ಸತ್ಯ-ಸೌಂದರ್ಯದಲಿ,
ವ್ಯಾಪ್ತನವನೇ!
ಚೆಲುವ ಚೆನ್ನಿಗರಾಯ;
—ಕವಿಯ ಕಾವ್ಯದ ಜೀವ-
ಒಲುಮೆಗಲೆಯುತ ಕಾವ,
**ದೇವನವನೇ!**

—ದುರ್ಗಾದಾಸ.

# ಸ್ಪಂದನ

ತಿಳಿಯದಂತೆಯೆ
ಗೆಳೆಯ ಗೆಳೆಯನ
    ಬಳಿಗೆ ಬರುವಂತೆ
    ಒಳಗೆ ಇರುವಂತೆ
ಜೀವವಿಂದಿಗೆ
ದೇವನಲ್ಲಿಗೆ
    ಧಾವಿಸುತಲಿಹುದು
    ಭಾವಿಸುತಲಿಹುದು.

ತೆರಳಿ ಪ್ರಾಣವು
ಮರಳಿ ಬಂದಿತು
    ಹೊಸತು ಬಾಳುವೆಯು
    ಹಸಿತ ಏಳುವೆಯು
ಅಲ್ಲಗಳೆಯುವ–
ದೆಲ್ಲಿಗುಳಿಯಿತೊ
    ಸುಹೃದನಿಹುದಹುದು
    ಅಹುದು ಇಹುದಹುದು.

ಇಹನು ಇಹನೋ
ಸುಹೃದನಿಹನೋ
    ನಲಿವು ಬಾಳುತಿದೆ
    ಉಲಿವು ಕೇಳುತಿದೆ
ಗಾಳಿಯಲೆಯಲಿ
ತೇಲಿ ಬರುತಿದೆ
    ಕೇಳಿ ನೀಗುವುದೇ?
    ತಾಳಲಾಗುವುದೇ?

ಎದೆಯು ವಿರಹದಿ
ಕುದಿಯುತಿದೆ ನೀ
ಬಾರದಿರೆ ಬೇಗ
ತೋರದಿರೆ ಈಗ
ಕುರುಹ ಕೊಟ್ಟವ
ವಿರಹವಿತ್ತವ
ಬರದೆ ಹೋಗುವರೇ?
ಇರದೆ ಸಾಗುವರೇ?

ಬಂದು ಬಿಡು ಬಾ
ಬಂದೆ ಬಿಡು ಬಾ
ದರ್ಶನವೆ ಬೇಕು
ಸ್ಪರ್ಶನವೆ ಬೇಕು
ಬಂದುದಾದರೆ
ಇಂದಿಗಾಗುವ
ಹರುಷವೇ ಹರುಷಾ
ಅರಿಕೆಯಿದು; ಪುರುಷಾ!

— ಪ್ರಹ್ಲಾದ.

---

# ದೀನಗಿಂತ ದೇವ ಬಡವ

ಹರಿಗೆ ಎಂದು ಗುಡಿಯನೊಂದು
ಕಟ್ಟುತಿರುವೆಯಾ!
ಹರಿಯ ಒಲುಮೆ ಪಡೆದು ಪುಣ್ಯ
ಗಳಿಸುತಿರುವೆಯಾ!
ಮರಳಿ ನೀನು ಹಳ್ಳಿಗೋಡು,
ದೀನ ಜನರ ಪಾದ ನೋಡು,
ಇರಲು ಗುಡಿಯು ಇಲ್ಲವಲ್ಲ,
ಹೊಟ್ಟೆತುಂಬ ಅನ್ನವಿಲ್ಲ,
ಹರಿಗೆ ಎಂದು ಗುಡಿಯನೊಂದು
ಕಟ್ಟುತಿರುವೆಯಾ!

ಹರಿಯ ವಿಶ್ವರೂಪವನ್ನು
ಮರೆತು ಬಿಟ್ಟೆಯಾ!
ಜಗಕೆ ಗೋಡೆ ಹಾಕಿ ಗುಡಿಯ,
ಕಟ್ಟಬಲ್ಲೆಯಾ!
ದೀನಗೊಂದು ಗೂಡು ಸಾಕು,
ದೇವಗೊಂದು ವಿಶ್ವ ಬೇಕು,
ಮಣ್ಣು, ಹುಲ್ಲು, ಸಣ್ಣ ಓಡು,
ಬಡವಗದುವೆ ಚಿನ್ನಗೂಡು,
ಹರಿಗೆ ಎಂದು ಗುಡಿಯನೊಂದು
ಕಟ್ಟುತಿರುವೆಯಾ!
ದೀನಗಿಂತ ದೇವ ಬಡವ–
ನೆಂದು ಬಗೆದೆಯಾ!

—ದಿನಕರ ದೇಸಾಯಿ.

---

# ನೇಗಿಲ ಯೋಗಿ

ನೇಗಿಲ ಹಿಡಿದಾ ಹೊಲದೊಳು ಹಾಡುತ
ಉಳುವಾ ಯೋಗಿಯ ನೋಡಲ್ಲಿ.
ಫಲವನು ಬಯಸದ ಸೇವೆಯೆ ಪೂಜೆಯು
ಕರ್ಮವೆ ಇಹಪರ ಸಾಧನವು
ಕಷ್ಟದೊಳನ್ನವ ದುಡಿವನೆ ತ್ಯಾಗಿ
ಸೃಷ್ಟಿನಿಯಮದೊಳವನೇ ಭೋಗಿ.

ಲೋಕದೊಳೇನೇ ನಡೆಯುತಲಿರಲಿ
ತನ್ನೀ ಕಾರ್ಯವ ಬಿಡೆನೆಂದೂ;
ರಾಜ್ಯಗಳುದಿಸಲಿ ರಾಜ್ಯಗಳಳಿಯಲಿ
ಹಾರಲಿ ಗದ್ದುಗೆ ಮಕುಟಗಳು
ಮುತ್ತಿಗೆ ಹಾಕಲಿ ಸೈನಿಕರೆಲ್ಲ
ಬಿತ್ತುಳುವುದನವ ಬಿಡುವುದೆ ಇಲ್ಲ.

ಬಾಳಿತು ನಮ್ಮಾ ನಾಗರಿಕತೆಯು
ಮಣ್ಣುಣಿ ನೇಗಿಲಿನಾಶ್ರಯದಿ
ನೇಗಿಲ ಹಿಡಿದಾ ಕೈಯಾಧಾರದಿ
ದೊರೆಗಳು ದರ್ಪದೊಳಾಳಿದರು
ನೇಗಿಲ ಬಲದೊಳು ವೀರರು ಮೆರೆದರು,
ಶಿಲ್ಪಿಗಳೆಸೆದರು, ಕವಿಗಳು ಬರೆದರು.

ಯಾರೂ ಅರಿಯದ ನೇಗಿಲ ಯೋಗಿಯೆ
ಲೋಕಕೆ ಅನ್ನವನೀಯುವನು.

ಹೆಸರನು ಬಯಸದೆ ಅತಿಸುಖಕೆಳಸದೆ
ದುಡಿವನು ಗೌರವಕಾಶಿಸದೆ.
ನೇಗಿಲಕುಳದೊಳಗಡಗಿದೆ ಕರ್ಮ,
ನೇಗಿಲ ಮೇಲೆಯೆ ನಿಂತಿದೆ ಧರ್ಮ.

— ಕೆ. ವಿ. ಪುಟ್ಟಪ್ಪ.

---

# ಜಗನ್ಮಾತೆ

ನೋಡ ಬನ್ನಿ
ಓಡಿ ಬನ್ನಿ
ಅಮ್ಮ ನಗುವಳು.
ಹಾರಿ ಬನ್ನಿ
ತೂರಿ ಬನ್ನಿ
ನಗುವ ಕಂಡು ಕುಣಿವ ಬನ್ನಿ
ನೋಡಿರದೋ
ಅಮ್ಮ ನಗುವಳು.

ರತ್ನ ಖಚಿತ
ಸೆರಗ ನಿರುತ
ಹೊದೆದು ನಮ್ಮನು
ಮಗುವ ಮಾಡಿ,
ತೂಗಿ ಹಾಡಿ,
ನಿದ್ದೆಗೈವ ಲೀಲೆ ನೋಡಿ,
ಆನಂದದಿ
ಅಮ್ಮ ನಗುವಳು.

ಕೆಂಯ ಸೀರೆ
ಜರಿಯ ಬೇರೆ
ಮಿನುಗುತಿರುವುದು;
ಹಣೆಯ ಮೇಲೆ
ಕುರುಳ ಮಾಲೆ
ಚದರಿದಭ್ರದಂತೆ ತೋರಿ,
ನೋಡಿರದೋ
ಅಮ್ಮ ನಗುವಳು.

ದಂತ ಪಂಕ್ತಿ
ಎಸೆವ ಕಾಂತಿ
ಮಿಂಚು ವರ್ಣವು.
ಒಮ್ಮೆ ಮೂಡಿ
ರೇಖೆ ಕೂಡಿ
ಮಾಯವಾಯ್ತು ಮತ್ತೆ ನೋಡಿ
ನೋಡಿರದೋ
ಅಮ್ಮ ನಗುವಳು.

ನಗುವ ಸದ್ದು
ಕೇಳುತಿಹುದು
ಗುಡುಗದೆಂಬಿರೋ?
ಅಲ್ಲ ಅಲ್ಲ
ಗುಡುಗದಲ್ಲ
ಬರಿಯ ಭೂತ ಚೇಷ್ಟೆಯಲ್ಲ.
ಖೊಳ್ಳೆಂದು
ಅಮ್ಮ ನಗುವಳು.

ಒಮ್ಮೆ ಬಲದ
ಒಮ್ಮೆ ಎಡದ
ಕಣ್ಣು ತೆರೆವಳು.
ಒಮ್ಮೆ ಹಗಲು
ಒಮ್ಮೆ ಇರುಳು
ಎಂಬ ಜನಕೆ ಏನು ಮರುಳು
ನೋಡಿರದೋ
ಅಮ್ಮ ನಗುವಳು.

ಒಮ್ಮೆ ನಲಿದು
ನಮ್ಮನೊಲಿದು,
ಬೆಳಕನೀವಳು.
ಒಮ್ಮೆ ಮುಳಿದು
ಬೆಳಕನಳಿದು,
ಎಮ್ಮ ಒಡಲ ಬೇಗೆ ತಿಳಿದು
ನೋಡಿರದೋ
ಅಮ್ಮ ಬರುವಳು.

ಹಿಂದು ಕಿಂದು
ಭಾವವಳಿದು
ನಮ್ಮ ಪೊರೆವಳು
ನಮ್ಮ ಅಮ್ಮ
ವಿಶ್ವದಮ್ಮ
ಪ್ರಾಣಿಮಾತ್ರರೆಲ್ಲರಮ್ಮ
ನೋಡಿರದೋ
ಅಮ್ಮ ನಗುವಳು.

— ದೇವೇಂದ್ರ ಶೇಟ್ಟಿ.

---

# ಒಂದು ಕಾಗದ

ನಿಮ್ಮ ಪತ್ರ ಬಂದು ಸೇರಿ
ಎರಡು ಮೂರು ಬಾರಿಯೋದಿ
ಎಲ್ಲ ತಿಳಿದೆನು.

ನೀವು ನನಗೆ ಗಂಡನಲ್ಲ
ನಾನು ನಿಮಗೆ ಹೆಂಡಿರಲ್ಲ
ನೀವು ತಿಳಿವುದು.

ಕುಂಟು ಕಾಲು ಬಚ್ಚು ಬಾಯಿ
ಮೆಳ್ಳಗಣ್ಣು, ನಿಮ್ಮ ಸೇವೆ
ಮಾಡಲಾರೆನು.

ಬ್ರಹ್ಮ ಹಿಂದೆ ಗಂಟು ಹಾಕಿ
ಗಂಡಹೆಂಡಿರಾದವೆಂದು
ನೀವು ಬರೆವಿರಿ.

ಬ್ರಹ್ಮ ಗಿಮ್ಮ ಹಾಕಲಿಲ್ಲ
ಅಪ್ಪ ತಂದು ನನಗೆ ನಿಮಗೆ
ಗಂಟುಹಾಕಿದ.

ಹೆತ್ತ ತಂದೆ ಮಾರಿಕೊಂಡು
ಮೃತ್ಯುವಾಗಿ ಕೊಲ್ಲಲಿಂತು
ಮಾಡಲೇನಿದೆ.

ಶಾಸ್ತ್ರಗೀಸ್ತ್ರ ತಿಳಿಯೆ ನಾನು
ಬರೆದ ಜನರು ಹೆಂಡಿರಾಗಿ
ಸೇವೆಮಾಡಲಿ.

ನೋಟ ಬೇಟ ಗಂಡಿಗೆಂದು
ಧರ್ಮಶಾಸ್ತ್ರ ಹೆಣ್ಣಿಗೆಂದು
ನುಡಿವರೆಲ್ಲರು.

ಕೋರ್ಟು ಗೀರ್ಟು ಆಡಬೇಡಿ
ಜಡ್ಜಿ ಧರ್ಮವೇನು ಬಲ್ಲ
ನಾನು ತಿಳಿಸುವೆ.

ಕುರ್ಚಿಮೇಲೆ ಕುಳಿತುಕೊಂಡು
ಏನೊ ಗೀಚಿ ಎದ್ದು ಬರುವ
ಮಾತಿದಲ್ಲವು.

ತನ್ನ ಮಗಳ ನಿಮಗೆ ಕೊಟ್ಟು
ತನ್ನ ಮಗನ ಎನಗೆ ಕೊಟ್ಟು
ಮದುವೆ ಮಾಡಲಿ.

ಎನ್ನ ದುಃಖ ಆರಿಗುಂಟು
ಬಾಳಬೇಕು, ಬಾಳಲಾರೆ
ಹಾಳು ಲೋಕವು.

ಬಯ್ವ ಜನರು ಜರಿವ ಜನರು
ಅವರಿಗೇನು, ಬಾಯಿ ಕೊಬ್ಬು
ನೋವು ತೆಗೆವರೆ?

ಬಲ್ಲನವರ ಮನದ ಭಾವ
ಇಂದು ನಾನು ಸೂಳೆಯಾಗಿ
ಸುಖಿಪರೆಲ್ಲರು.

೧೧೧

ಭೂಮಿ ಮೇಲೆ ಇರುವಳಲ್ಲ
ಇಂದೆ ನಾನು ಕೆರೆಗೆ ಬಿದ್ದು
ಜನ್ಮ ನೀಗುವೆ.

ಶಾಸ್ತ್ರ ಧರ್ಮ ತಣ್ಣಗಾಗಿ
ಬಯ್ವ ಜನರು ಉರಿದು ಹೋಗಿ
ಲೋಕವಡಗಲಿ.

ಎಂ. ಆರ್. ಶ್ರೀನಿವಾಸಮೂರ್ತಿ.

---

# ಅವಳಿಜವಳಿ

ತುಳುಕಿ ಬಳುಕಿ ಬೆನ್ನ ಹಿಂದೆ
ಬಂದು ನಿಂದಳು
ಮೌನದೊಂದು ಮಾತಿನಿಂದ
ನಡೆಯ ಕೊಂದಳು!
ಹೃದಯವೆದ್ದು ಸಿಡಿಯುತಿತ್ತು
ಮನದ ಮುದ್ದು ನುಡಿಯುತಿತ್ತು!
ಕಂಗಳಿದ್ದುವೊಂದೆ ತುತ್ತು!
ಬಳಿಗೆ ಬಂದಳು
ಜತೆಗೆ ನಿಂದಳು.

ಮೊಗವ ಕಂಡೆನದರ ಬಿಂಬ-
ವೆನ್ನ ಸೇರಿತು
ಕಿರಣದಂತೆ ಭಾವಗಳನು
ಮನಕೆ ತೂರಿತು
ಗಳಿಗೆಯೊಂದು ಸುಧೆಯ ಹನಿ!
ದಿವಸವಂದು ಸೊಗದ ಗನಿ!
ನೆನಹಿದೊಂದು ಮನಕೆ ಧನಿ!
ಪುಳಕವೇರಿತು!
ಸಗ್ಗ ತೋರಿತು!

ಅವಳು ನಾನು ಜತೆಯಲಿದ್ದು
ಬಯಲ ಕಂಡೆವು
ಬಯಲು ಸುರುಳು ಸುತ್ತಿ ಬಹುದ-
ನರಿತುಕೊಂಡೆವು

ಎದೆಗಳೆರಡು ಕದಗಳಾಗಿ
ಜಗದ ಬರಡುತನಕೆ ರೇಗಿ
ಮುಚ್ಚಿ ಕುರುಡುಗೊಳಿಸಹೋಗಿ
ಮೌನವುಂಡವು
ಸರಸಗೊಂಡವು!

ಎರಕಗೊಂಡ ಭಾವದೊಂದು
ಹೊನಲು ಹರಿಯಿತು
ಕಿವುಡು ಜಗಕೆ ಕೇಳ ಸಿಗದ
ನಾದ ಮೊರೆಯಿತು
ಕೂಡಿನಿಂದ ಸೊಬಗು ಸವಿ!
ಕಣ್ಣು ತಿಂದ ಸುಖದ ಹವಿ
ಭಾವ ತಂದ ಭುವಿಯ ಭುವಿ
ಬಳಿಗೆ ಕರೆಯಿತು
ಬಂದು ಬೆರೆಯಿತು!

ಹೃದಯವೆದ್ದ ಕುರುಹಿಗಾಗಿ
ಮುಗುಳು ನಕ್ಕಳು
ಅವಳ ಮೊಗದ ಕಲೆಗಳೆನ್ನ
ಮತಿಗೆ ಮಕ್ಕಳು!
ಬಳುಕಿ ಬಾಡಿ ಮೊಗವ ನೋಡಿ
ಮಾತನಾಡಿ ನಗೆಯನೂಡಿ
ಎದೆಯಗೂಡಿನೊರಲ ಹಾಡಿ
ಮನವ ಹೊಕ್ಕಳು!
ಆದಳೊಕ್ಕಲು!

ಒಳಗಿನೊಂದು ಗೂಢ ಚಿಂತೆ–
ಯರಿವನಿತ್ತಳು

ಎನ್ನ ಹೃದಯವವಳ ಬಗೆಗೆ
ನಲಿವ ಹಿತ್ತಲು!
ಅವಳ, ಕೊರತೆಗೂಡಿದೆದೆ
ಜಗವ ಮರೆತ್ತೆ, ಮತಿಯ ವಧೆ
ಮಾಡಿ ಬರುತ ಸೇರಿತದೆ
ಬಯಲ ಸುತ್ತಲು
ನೋಡಲಿತ್ತಲು!

ಪ್ರೇಮ ಬೆರೆತ ಭಾವದೊಡನೆ
ಸುಖಿಸಿ ನಿಂದೆವು
ಬಗೆಗಳೆರಡ ಜತೆಗೆ ಬಿಟ್ಟು
ಆಡಲೆಂದೆವು!
ಸುಳಿವ ನೋವು ತೆವಳಿ ತೆವಳಿ
ಸಾವ ಹಾವು, ದೇವಿಯವಳಿ–
ಗಿಬ್ಬರಾವು ಅವಳಿ ಜವಳಿ!
ಸೊಗವ ತಂದೆವು
ಸುಖಕೆ ಸಂದೆವು!

—'ವಿಠು'

# ಪ್ರಾರ್ಥನೆ

(Lead Kindly Light ಎಂಬ ಗೀತವನ್ನು ಅನುಸರಿಸಿ ಬರೆದುದು.)

ಸ್ಸರಿದಾರಿ ತಪ್ಪದಂತೆ, ಕರುಣಾ
ಕಿರಣ ಬೆಳಗು ಮುಂತೆ–ಪ–

ಮರುಳಾದೆ ಸುತ್ತಿ ಬಳಲೀ
ಸಂಸಾರಯಾತ್ರೆಯಲ್ಲಿ.
ಮನೆ ದೂರ ಉಳಿದುದಲ್ಲೀ
ಘನಘೋರ ಕತ್ತಲಿಲ್ಲೀ.

ಹಗಲೆಲ್ಲ ಬೆಳಗುತಿರಲು
ಜಗವೆಲ್ಲ ನನ್ನದೆಂದೆ.
ಬಲು ಹಿಗ್ಗಿ ಗರ್ವದಿಂದೇ
ನಿನ್ನ ಸ್ಮರಣೆಯಿರದೆ ಮರೆದೆ.

ಅಪರಾಧವನ್ನು ಕ್ಷಮಿಸೀ
ಕೃಪೆದೋರು ಕತ್ತಲಲ್ಲೀ
ಮರುಗೆ ಘೋರ ಮಳೆಗೆ
ಗಿರಿಕಾಂತಾರಗಳಿಗೆ ಹೊಳೆಗೆ

ಪಾರಾಗಿ ಮುಂದೆ ನೋಡೆ
ಮುದಮೀರಿ ರವಿಯು ಮೂಡೆ
ನಗುವ ನಿನ್ನ ಮೋರೆ
ನನ್ನ ಆತ್ಮಕೆ ಧ್ರುವತಾರೆ.

ಬಲುದೂರ ನೋಡಲೆಂದೂ
ನಾನಾಶಿಸಿಲ್ಲವಿಂದೂ
ಇದೊಂದು ಹಜ್ಜೆ ತೋರೆ
ದೇವಾ ಮುಂದೆ ನಿನ್ನ ದೂರೆ.

—ಎಂ. ಎನ್. ಕಾಮತ್.

---

# ನಮ್ಮ ಬಿನ್ನಹ

ಅಖಿಲ ಕರ್ನಾಟಕದಲ್ಲಿ ಸವಿಗವನಗಳ ಸುಗ್ಗಿಯಾಗಬೇಕು; ಆಧುನಿಕ ಕವಿಶ್ರೇಷ್ಠರ ಪರಿಚಯವನ್ನು ಜನತೆಗೆ ಮಾಡಿಸಿಕೊಡಬೇಕು; ಆ ಸಾಹಿತ್ಯ ಭಕ್ತರ ಮೇಲ್ಪಂಕ್ತಿಯನ್ನು ಇತರರೂ ಅನುಸರಿಸುವಂತೆ ಅವರ ಒಂದೊಂದು ಕವನಗಳನ್ನು ಆಯ್ದು, ಒಂದೇ ಕಾವ್ಯಮಾಲೆಯಲ್ಲಿ ಪೋಣಿಸಬೇಕು-ಎಂಬೀ ಹಿರಿಬಯಕೆಯಾಯಿತು ನಮಗೆ. ಬಗೆದ ಭಾವನೆಯ ಹಿಂದುಮುಂದನ್ನು ಯೋಚಿಸದೆ ಕಾರ್ಯರಂಗಕ್ಕೆ ಧುಮುಕಿದೆವು. ಅಲ್ಲ, ತೊಡಕಿನ ಸುತ್ತಾದ ಹಾದಿಯನ್ನು ತುಳಿಯುವಾಗ, 'ಇದು ನಮ್ಮ ಅಲ್ಪ ಸಾಮರ್ಥ್ಯಕ್ಕೆ ಮಿಕ್ಕಿದ್ದೆ'ಂಬ ಅರಿವು ಬಂತು ಆದರೂ, ಮುಂದಿಟ್ಟ ಹೆಜ್ಜೆಯನ್ನು ಹಿಂದಿಡಬಾರದೆಂಬ ಸಾಧನೆಯಿಂದ ಎಡರನ್ನು ಹಾಯ್ದು ಹಾಯ್ದು ಮುಂದೆ ಸರಿದೆವು. ಹೀಗೆ ಸಾಗುವಾಗ ದೃಷ್ಟಿಯ ಮರೆಯಲ್ಲಿ ತಪ್ಪುಗಳು ಇಣಿಕಿ ನೋಡದಿರಲಾರವೆಂಬ ಭೀತಿಯು ನಮ್ಮನ್ನು ತಟ್ಟದಿರಲಿಲ್ಲ. ಒದಗಬಹುದಾದ ತಪ್ಪಿಗಾಗಿ—ಅದೂ ಗುಣೈಕಪಕ್ಷಪಾತಿಗಳಾದ ನಮ್ಮ ಹಿರಿಯ ಬಂಧುಭಗಿನಿಯರ ಮುಂದೆ— ಏಕೆ ಹೆದರಿ ಹಿಂಜರಿಯಬೇಕು ಎಂಬೀ ಧೈರ್ಯವು, ಈ ಬಿಕ್ಕಟ್ಟಿನ ಪರಿಸ್ಥಿತಿಯ ಮಧ್ಯದಲ್ಲೂ ನುಗ್ಗಿ ಮುಂದರಿಯುವಂತೆ ನಮ್ಮನ್ನು ಪ್ರೋತ್ಸಾಹಿಸಿತು.

ನಮ್ಮೀ ಕಾರ್ಯದಲ್ಲಿ ಹಲವರು ನೆರವಾಗಿದ್ದಾರೆ. ಅಪರಿಚಿತರಾದ ಕವಿಗಳನ್ನು ತೋರಿಸಿಕೊಟ್ಟ ಗೆಳೆಯರು, ತಮ್ಮ ಕವಿತೆಗಳನ್ನು ಕಳುಹಿಕೊಟ್ಟ ಪ್ರಸಿದ್ಧರಾದ ಕವಿಗಳು, ಅಲ್ಲಲ್ಲಿಯ ಕವಿತೆಗಳನ್ನು ಅಲ್ಲಲ್ಲಿಯೇ ಒಟ್ಟು ಹಾಕಿಕೊಟ್ಟು ಬೆನ್ನುತಟ್ಟಿದ ಹಿತಚಿಂತಕರು, ಹಣಕೊಟ್ಟು ಬೆಂಬಲಕ್ಕೆ ನಿಂತ ಕೊಡುಗೈಯ ಬಂಧುಗಳು, ಇದನ್ನು ತಕ್ಕ ಕಾಲದಲ್ಲಿ ಮುದ್ದಾಗಿ ಮುದ್ರಿಸಿಕೊಟ್ಟ ತುಳುನಾಡ್ ಛಾಪಖಾನೆಯ ವ್ಯವಸ್ಥಾಪಕರಾದ ಶ್ರೀಯುತ ಎಸ್. ಯು. ಪಣಿಯಾಡಿಯವರು ಇವರೆಲ್ಲರಿಗೂ ನಾವು ಚಿರಋಣಿಗಳು ಮುಖ್ಯವಾಗಿ, ತಮ್ಮ ಮಹತ್ವದ ಕಾರ್ಯಬೊಗಸೆಗಳನ್ನೆಲ್ಲ ಬದಿಗಿಟ್ಟು ಇದಕ್ಕೆ ಮುನ್ನುಡಿಯನ್ನು ಬರೆದು ನಮ್ಮನ್ನು ಹರಸಿ ಮುಂದೂಡಿದ ಹಿರಿಯರಿಗೂ ಹಿರಿಯರಾದ ಶ್ರೀಯುತ ಬಿ. ಎಂ. ಶ್ರೀಕಂಠಯ್ಯ ಎಂ.ಎ., ಬಿ.ಎಲ್. ಇವರಿಗೆ ನಮ್ಮ ಹೃತ್ಪೂರ್ವಕವಾದ ಸಾಷ್ಟಾಂಗ ವಂದನೆಗಳು.

## ನಮ್ಮ ವಿನ್ನಹ

ನಮ್ಮಾ ಪ್ರಯತ್ನದಿಂದ ಜನತೆಯು ಏನಾದರೂ ಪ್ರಯೋಜನವನ್ನು ಪಡೆಯುವುದಾದರೆ, ಅದೇ ನಮ್ಮ ಆನಂದ; ನಾವು ಕವಿಗಳೆಲ್ಲರಿಗೆ ಕೊಟ್ಟ ಪ್ರಯಾಸಕ್ಕೂ ಅದೇ ಪುರಸ್ಕಾರ. ಓದುಗರು ಮುಂದೆ ಇದಕ್ಕಿಂತಲೂ ಉತ್ತಮವಾದ ಸೇವೆಯನ್ನು ನಮ್ಮಿಂದ ಮಾಡಿಸಿಕೊಳ್ಳುವುದು ಅವರ ಉದಾರಾಶ್ರಯವನ್ನವಲಂಬಿಸಿದೆ.

ಇಂತು ಬಿನ್ನಯಿಸುವ,

ಉಡುಪಿ,
ತಾ. ೨೦—೫—೧೯೩೪

ಕಾರ್ಯದರ್ಶಿ,
ಕಿರಿಯರ ಪ್ರಪಂಚ.

# ಪ್ರಾರ್ಥನೆ

ಸಾಹಿತ್ಯಗಳ ಮೇಲಾಟದ ಕಾಲವಿದು. ಕನ್ನಡವೂ ಅವುಗಳ ಸಹಪಂಕ್ತಿಯಲ್ಲಿ ತಲೆಯೆತ್ತಿ ನಿಂತು ಸ್ಪರ್ಧಿಸಲೆಂದು ಹಿರಿಯರ ಪ್ರಯತ್ನ. ಅವರ ಪ್ರಯತ್ನದಲ್ಲಿ ತುಸು ಬೆಂಬಲದ ಸೇವೆಯನ್ನು ಮಾಡ ಬೇಕೆಂದು **'ಕಿರಿಯರ'** ಭಾವನೆ. ಈ ಭಾವನೆಯೇ ದೈವಪ್ರೇರಣೆಯಿಂದ **'ಕಿರಿಯರ ಪ್ರಪಂಚ'**ವಾಗಿ ತಲೆಯೆತ್ತಿರುವುದು.

ಸಮಾಜದ ಏರಿಳಿಕೆಗಳು ಅದರ ಆಚಾರದಲ್ಲಡಕವಾಗಿವೆ. ಆಚಾರದ ಒಳಿತು ಹೀನತೆಗಳು ವಿಚಾರದ ಕೈಯೊಳಗಿವೆ. ಇಂತಹ ಸುವಿಚಾರದ ಪಡಿಯಚ್ಚುಗಳನ್ನು ಸಾಧ್ಯವಾದ ಮಟ್ಟಿಗೆ ಸಂಗ್ರಹಿಸಿ ಸಮಾಜದ ಮುಂದಿಡು ವುದೇ 'ಕಿರಿಯರ ಪ್ರಪಂಚ'ದ **'ತೊದಲ್ನುಡಿ'** ಗ್ರಂಥಮಾಲೆಯ ಹಿರಿ ಗುರಿ. ಮಾಲೆಯಲ್ಲಿ ಈ ಪಡಿಯಚ್ಚುಗಳು ಕಥೆ, ಕಾದಂಬರಿ, ಕವನ, ನಾಟಕಾದಿಗಳ ರೂಪದಲ್ಲಿ ಹೊರಬೀಳುವವು ಈ ನಮ್ಮ ಕಾರ್ಯದಲ್ಲಿ ಭಾಷಾಭಿಮಾನಿಗಳೂ ದೇಶಾಭಿಮಾನಿಗಳೂ ಕೈಕೊಟ್ಟು ಸಹಕರಿಸಿ ನಮ್ಮಿಂದ ಸೇವೆಯನ್ನು ಮಾಡಿಸಿ ಕೊಳ್ಳಬೇಕಾಗಿ ಪ್ರಾರ್ಥನೆ

ಆಶ್ರಯಾದರಗಳು ದೊರಕಿದರೆ ವರ್ಷಕ್ಕೆ ೩–೪ ಗ್ರಂಥಗಳನ್ನು ಸಾಧ್ಯ ವಾದ ಮಟ್ಟಿಗೆ ಹೊರಡಿಸಬೇಕೆಂದು 'ಕಿರಿಯರ ಪ್ರಪಂಚ'ವು ನಿರ್ಧರಿಸಿರುವುದು.

**ಸಂಘವು ಈ ಕೆಳಗಿನಂತೆ ಸಹಾಯವನ್ನು ಅಪೇಕ್ಷಿಸುತ್ತದೆ.**

**ಗ್ರಂಥಮಾಲೆಗೆ ರೂ. ೨೫ಕ್ಕೆ ಮಿಕ್ಕಿ ಕೊಟ್ಟವರು ರಕ್ಷಕರು.**

| | | | |
|---|---|---|---|
| ,, | ರೂ. ೧೦ಕ್ಕೆ | ,, ,, | **ಆಶ್ರಯದಾತರು** |
| ,, | ರೂ. ೫ಕ್ಕೆ | ,, ,, | **ಪೋಷಕರು.** |

ಇವರೆಲ್ಲರ ಹೆಸರುಗಳನ್ನು ದ್ರವ್ಯಸಹಾಯಕ್ಕನುಸಾರವಾದ ಸಂಖ್ಯಾ ಮಾನದಿಂದ ಗ್ರಂಥಮಾಲೆಯಲ್ಲಿ ಪ್ರಕಟವಾಗುವ ಗ್ರಂಥಗಳಲ್ಲಿ ಪ್ರಕಟಿಸ ಲಾಗುವುದು. ಅಂತೆಯೇ ಅವರಿಗೆ ಗ್ರಂಥಗಳನ್ನು ಧರ್ಮಾರ್ಥವಾಗಿ ಕೊಡ ಲಾಗುವುದು.

**ಕಾರ್ಯದರ್ಶಿ,**

**ಉಡುಪಿ,** **'ಕಿರಿಯರ ಪ್ರಪಂಚ'**

# ಗ್ರಂಥಮಾಲೆಗೆ

ಇದುವರೆಗೆ ಹಣ ಕೊಟ್ಟ ಮತ್ತು ಕೊಡಲೊಪ್ಪಿದ ಮಹನೀಯರು.

---

## ರಕ್ಷಕರು

೧ ಶ್ರೀ. ಪಿ. ಲಕ್ಷ್ಮೀನಾರಾಯಣ ನಾಯಕ್,
ಶ್ರೀಮದ್ಭುವನೇಂದ್ರ ಮಹೌಷಧಾಲಯ, ಕಟಪಾಡಿ.

೨ ಶ್ರೀ. ಕೆ. ಸುಬ್ರಾಯ ಚರ್ಡಪ್ಪ ಶ್ಯಾನುಭಾಗ,
ಸೆಕ್ರೆಟರಿ, ಕೋಪರೇಟಿವ್ ಸೊಸ್ಯಾಟಿ, ಕಟಪಾಡಿ.

## ಆಶ್ರಯದಾತರು

೧ ಶ್ರೀ. ಅಂಬಾಡಿಬೀಡು ಗೋಪಾಲ ಶೆಟ್ಟಿ, ಕಟಪಾಡಿ.

೨ ಶ್ರೀ. ತೋನ್ಸೆ ಜನಾರ್ದನಯ್ಯ, ಉಡುಪಿ.

೩ ಶ್ರೀ ಪಿ. ರಾಮದಾಸ ನಾಯಕ್, ಬಿ.ಎ.,ಎಲ್.ಟಿ. ಕಟಪಾಡಿ.

೪ ಶ್ರೀ. ಯು. ವೆಂಕಟ್ರಾಯ ಕಾಮತ್, ಉಡುಪಿ.

೫ ಮಿ.-ಯಫ್. ಯಸ್. ದಾಲ್ಮೇದ, ಮುಖ್ಯೋಪಾಧ್ಯಾಯ,
ಸೈಂಟ್ ಫ್ರಾನ್ಸಿಸ್ ಕ್ಸೇವಿಯರ್ಸ್ ಹಾ. ಎ. ಶಾಲೆ, ಉದ್ಯಾವರ.

೬ ಶ್ರೀ. 'ಕಾಮತ್', ಕಟಪಾಡಿ.

೭ ಶ್ರೀ. ಪಾಂಗಾಳ ಜನಾರ್ದನ ನಾಯಕ್, ಕಟಪಾಡಿ.

೮ ಶ್ರೀ. ಕೆದಿಂಜೆ ವೆಂಕಪ್ಪಯ್ಯ ಹೆಗ್ಡೆ, ಜಮೀನ್ದಾರ್, ಯೇಣಗುಡ್ಡೆ.

ಗ್ರಂಥಮಾಲೆಗೆ ಇದುವರೆಗೆ ಹಣಕೊಟ್ಟು ಮತ್ತು ಕೊಡಲೊಪ್ಪಿದ ಮಹನೀಯರು

## ಪೋಷಕರು

---

೧ ಶ್ರೀ. ಕೆ. ರಾಮ ಕಾಮತ್, ಮರ್ಚಂಟ್, ಕಟಪಾಡಿ.

೨ ಶ್ರೀ. ನಂದಪ್ಪ ಹೆಗ್ಡೆ, ಯೇಣಗುಡ್ಡೆ.

೩ ಶ್ರೀ ಕೆ. ಕೃಷ್ಣಯ್ಯ ಶೆಟ್ಟಿ, ಪಡುಮನೆ, ಕೆಮ್ತೂರು.

೪ ಶ್ರೀ. ಕೆ. ನಾರಾಯಣ ಶೆಟ್ಟಿ, ಜಮೀನ್ದಾರ್, ಕೊರಂಗ್ರಪಾಡಿ.

೫ ಶ್ರೀ. ಯು. ಪರಮೇಶ್ವರ ಮೇಸ್ತ್ರ,
ಗೋಲ್ಡ್‌ಮೆಡಲ್ಡ್ ಫಿಜಿಶಿಯನ್, ಉದ್ಯಾವರ.

೬ ಶ್ರೀ. ಪುತ್ತಿಗೆ ಸುಬ್ರಹ್ಮಣ್ಯಾಚಾರ್ಯ, ಉದಿಯಾವರ ಕುದುರು.

೭ ಶ್ರೀ. ಬೆಳ್ಕಳೆ ಕೆರೆಮನೆ ವೆಂಕಪ್ಪಶೆಟ್ಟಿ,
ತುಳುನಾಡ್ ಛಾಪಖಾನೆ, ಉಡುಪಿ.

೮ ಶ್ರೀ. ಕುತ್ಪಾಡಿ ತಿಮ್ಮಪ್ಪ ಶೆಟ್ಟಿ, ಉಡುಪಿ.

೯ ಶ್ರೀ. ಬೆಳ್ಕಳೆ ಕೆರೆಮನೆ ನಾರಾಯಣ ಶೆಟ್ಟಿ,
ಪ್ರಭಾಕರ ಪ್ರೆಸ್, ಉಡುಪಿ.

೧೦ ಶ್ರೀ. ಕೊರಂಗ್ರಪಾಡಿ ತೇಜಪ್ಪ ಶೆಟ್ಟಿ, ಕೃಷ್ಣಾ ಪ್ರೆಸ್, ಉಡುಪಿ.

---

ಇದುವರೆಗೆ ಪ್ರಕಟವಾದ

# 'ತೊದಲ್ನುಡಿ' ಗ್ರಂಥಮಾಲೆಯ

# ನು ಡಿ ಗ ಳು

೧

## ಸ್ವತಂತ್ರ ಜೀವನೋಪಾಯ

(ಚಿಕ್ಕ ಪ್ರಹಸನ)

ಬೆಲೆ ೦ ೨ ೬

೨

## ಸಂ ಶ ಯ ಪಿ ಶಾ ಚಿ

(ಸಾಮಾಜಿಕ ನಾಟಕ)

ಬೆಲೆ ೦ ೬ ೦

೩

## ನಾ ಡ ಕ ಥೆ ಗ ಳು

(ಕಥಾಸಂಗ್ರಹ)

ಬೆಲೆ ೦ ೨ ೦

೪

## ಕು ಶ - ಲ ವ

(ಶಿಕ್ಷಣವಿಚಾರವನ್ನೊಳಗೊಂಡ ಪೌರಾಣಿಕ ಕಥೆ)

ಬೆಲೆ ೦ ೪ ೦

ಕಿರಿಯರ ಪ್ರಪಂಚ,
ಉಡುಪಿ